೫೭



ಜುಲೈ - ಸೆಪ್ಟೆಂ - ೦೯

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿ ತ್ರೈಮಾಸಿಕ



## ಕಾಡಿನ ಧ್ಯಾನ : ತೇಜಸ್ವಿ



- ಡಾ। ಹರಿವಂಶರಾಯ್ ಬಚ್ಚನ್ : ಮಧುಶಾಲಾ
- ಗುಜರಾತಿ ದಲಿತ ಕಥೆ
- ಡಾ। ಎ.ಪಿ.ಜೆ. ಅಬ್ದುಲ್ ಕಲಾಂ ಕವಿತೆ
- ಡಾ। ಹಂಪನಾರ 'ಚಾರುವಸಂತ'
- ಚೀನಿ ಚರಿತ್ರೆಯ ಕ್ರೌರ್ಯ : ಪುಟ್ಟ ಪಾದಗಳು



## <u>ದಯವಿಟ್ಟು ಗಮನಿಸಿ</u>

ಪ್ರತಿ ಪುಸ್ತಕಕ್ಕೂ ಮುಖ ಬೆಲೆಯ ಶೇ. ೨೦ರಷ್ಟು
ರಿಯಾಯಿತಿ ನೀಡಲಾಗುವುದು.

❁ ❁ ❁

ಶೇ. ೩೩ರಷ್ಟು ರಿಯಾಯಿತಿಯಿದೆ. ಒಂದು ಸಾವಿರ ರೂಪಾಯಿಗಳಿಗೆ
ಮೇಲ್ಪಟ್ಟು ಪುಸ್ತಕಗಳನ್ನು ಖರೀದಿಸಬೇಕು.

❁ ❁ ❁

ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡ ಹಾಗೂ ಇಂಗ್ಲೀಷ್
ಭಾಷೆಗಳಲ್ಲಿ ಪ್ರಕಟಿಸುತ್ತಿರುವ ತ್ರೈಮಾಸಿಕ ಪತ್ರಿಕೆ
'ಅನಿಕೇತನ' ಕ್ಕೆ ಚಂದಾದಾರರಾಗಿರಿ.

| | | |
|---|---|---|
| ವಾರ್ಷಿಕ ಚಂದಾ | - | ೭೦-೦೦ |
| ಅಜೀವ ಚಂದಾ | - | ೨೫೦-೦೦ |
| ಬಿಡಿ ಪ್ರತಿ | - | ೨೦-೦೦ |

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ

ಜುಲೈ - ಸೆಪ್ಟೆಂಬರ್, ೨೦೦೩

ಸಂಪಾದಕರು

ಪ್ರೊ. ವಿ. ಚಂದ್ರಶೇಖರ ನಂಗಲಿ

ಲಕ್ಷ್ಮೀಪತಿ ಕೋಲಾರ



ಕರ್ನಾಟಕ ಸಾಹಿತ್ಯ ಅಕಾಡೆಮಿ

ಬೆಂಗಳೂರು

ANIKETHANA : A Literary Journal (Quarterly)
Edited by : **Prof. V. Chandrashekara Nangali**
**Lakshmipathi Kolara**
Published by : Registrar, Karnataka Sahithya Academy
Kannada Bhavana, J.C. Road, Bangalore - 2

Pages : Xii + 122

Registration No. 45646/88

ಸಂಪುಟ : ೧೫

ಸಂಚಿಕೆ : ೧

ಪ್ರತಿಗಳು : ೧೨೦೦

ಪ್ರಧಾನ ಸಂಪಾದಕರು

**ಡಾ. ಗುರುಲಿಂಗ ಕಾಪಸೆ**

ಅಧ್ಯಕ್ಷರು

ಕರ್ನಾಟಕ ಸಾಹಿತ್ಯ ಅಕಾಡೆಮಿ

ಪ್ರಕಾಶಕರು

**ವಿ. ಎಸ್. ಮಲ್ಲಿಕಾರ್ಜುನಸ್ವಾಮಿ**

ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ

ಕನ್ನಡ ಭವನ, ಜೆ. ಸಿ. ರಸ್ತೆ

ಬೆಂಗಳೂರು - ೫೬೦ ೦೦೨

**ಬಿಡಿ ಪ್ರತಿ : ರೂ. ೨೦/-**

**ವಾರ್ಷಿಕ ಚಂದಾ : ರೂ. ೭೦/-**

**ಆಜೀವ ಚಂದಾ : ರೂ. ೨೫೦/-**

ಮುಖಪುಟ ಕಲೆ : ಕೃಷ್ಣ ರಾಯಚೂರು

ಛಾಯಾಚಿತ್ರ ಕೃಪೆ : ಕೆ. ಪಿ. ಪೂರ್ಣಚಂದ್ರ ತೇಜಸ್ವಿ

ಹಿಂಬದಿ ಚಿತ್ರ ಕೃಪೆ : ಕೃಷ್ಣರಾಯಚೂರು ಮತ್ತು ಪಿ.ಎಸ್. ಕಡೇಮನಿ ಬಿಜಾಪುರ್

ರಕ್ಷಾಪುಟ ವಿನ್ಯಾಸ : ಎಸ್. ಮಂಜುನಾಥ್

ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA

೧೧೭/೨, ೫ನೇ ಮುಖ್ಯರಸ್ತೆ

ಚಾಮರಾಜಪೇಟೆ, ಬೆಂಗಳೂರು - ೧೮

೬೬೧೩೧೨೩, ೬೬೧೮೭೫೨

# ಕಾಡಿನ ಧ್ಯಾನ ತೇಜಸ್ವಿ

ಬದುಕಿನ ಅತ್ಯಂತ ಸಾಮಾನ್ಯ ಮತ್ತು ನಿರ್ಲಕ್ಷಿತ ಸಂದರ್ಭಗಳಲ್ಲೂ ಪದೇಪದೇ ನೆನಪಿಗೆ ಬರುವ ಲೇಖಕ ಕೆ.ಪಿ. ಪೂರ್ಣಚಂದ್ರ ತೇಜಸ್ವಿ. ಒಬ್ಬ ಲೇಖಕ ತನ್ನ ಓದುಗರ ಐಹಿಕ ಬದುಕಿನಲ್ಲಿ ಅಥವ ಅವರ ಭಾವಪ್ರಪಂಚದ ವಿವಿಧ ಸನ್ನಿವೇಶಗಳಲ್ಲಿ ಹೀಗೆ ಸೂಕ್ಷ್ಮವಾಗಿಯೂ, ಅಖಂಡವೆಂಬಂತೆಯೂ ಹಾಸುಹೊಕ್ಕಾಡುವುದು ಆತನ ಬರವಣಿಗೆಯ ಶ್ರೇಷ್ಠತೆಯ ದ್ಯೋತಕ. ಒಂದು ಕಡ್ಡಿ ಹುಳ, ತನ್ನ ಪಾಡಿಗೆ ತಾನೆಂಬಂತಿದ್ದೂ ಕಣ್ಸೆಳೆಯುವ ಒಂದು ಹಕ್ಕಿ, ನದಿ-ಮೀನು, ದಿನನಿತ್ಯದ ವ್ಯಾಪಾರದಲ್ಲಿ ದುತ್ತನೆ ಎದುರಾಗುವ ವಿಲಕ್ಷಣ ವ್ಯಕ್ತಿತ್ವದ ಪಾತ್ರಗಳು, ತಟ್ಟನೆ ಹಿಡಿದು ನಿಲ್ಲಿಸುವ ಒಂದು ಧ್ಯಾನದ ನೋಟ, ತಮ್ಮಿಂತಾವೇ ವ್ಯಾಖ್ಯಾನಕ್ಕೊಳಪಡುವ ಮನುಷ್ಯ ಸಂಬಂಧಗಳು, ಯಾವುದೋ ಮಾಯೆಯೆಂಬಂತೆ ಆವರಿಸಿಕೊಂಡು ಅನುಭವವೇದ್ಯವಾಗುವ ನಿಸರ್ಗದ ನಿಗೂಢಗಳು, ಅವುಗಳ ಹಿಂದಿನ ಪ್ರಾಕೃತಿಕವೂ, ಬೆರಗು-ಚೆಲುವಿನವೂ ಆದ ತರ್ಕಗಳು, ಅಂತರಂಗದೊಂದಿಗಿನ ತಾತ್ವಿಕ ಚರ್ಚೆಗಳು, ಸಂಸ್ಕೃತಿ-ಸಿದ್ಧಾಂತ-ಹೋರಾಟ.... ಹೀಗೆ ಎಷ್ಟೆಲ್ಲ ಭಿನ್ನ ಸನ್ನಿವೇಶಗಳಲ್ಲಿ ಪೂಚಂತೇ ನಮ್ಮ ನೆನಪಿನೊಂದಿಗೇ ಅಭಿನ್ನವಾಗಿ ಬರುತ್ತಾರೆ. ದೃಶ್ಯಗಳಲ್ಲಿ ಶಬ್ದವಾಗುತ್ತಾರೆ; ಶಬ್ದಗಳಲ್ಲಿ ಗಹನ ಅರ್ಥಗಳಾಗಿ ಹೊರಳುತ್ತಾರೆ; ಸತ್ಯದ ಅನಂತ ಮುಖಗಳ ಸಾಪೇಕ್ಷವನ್ನು ವಿವರಿಸುವ ಸಂತನೋ, ದ್ರಷ್ಟಾರನೋ ಆಗಿ ಕಾಣಿಸುತ್ತಾರೆ. ಮರುಗಳಿಗೆ ಯಾವುದೋ ಚಕಿತವನ್ನು ಕಂಡವರಂತೆ ಚಕ್ಕನೆ ಧ್ಯಾನಮಗ್ನರಾಗಿ ನಿರುಕಿಸುತ್ತ ನಿಂತುಬಿಡುತ್ತಾರೆ. ಓದುಗರಲ್ಲಿ ತೇಜಸ್ವಿ ಕೇವಲ ಹೀಗೆ ಭೌತಿಕವಾಗಿ ಮಾತ್ರ ಬದುಕುತ್ತಿಲ್ಲ. ನಮ್ಮ ನಿಕಟ ಪರಿಚಯ ದವರಿಗಿಂತಲೂ ತೇಜಸ್ವಿ ನಮ್ಮ ಹೃದಯಕ್ಕೆ ಹೆಚ್ಚು ಸಮೀಪವಾಗಿ ಉತ್ಕಟ ಗಳಿಗೆಗಳಲ್ಲಿ ಅದ್ವೈತವಾಗುತ್ತಾರೆ.

ತೇಜಸ್ವಿ ನಮ್ಮ ಕಾಲದ ಮಹಾನ್ ಭೌತವಾದೀ ಲೇಖಕ. ಇವರ ಕಾಡಿನ ಧ್ಯಾನದಲ್ಲಿ ನಾಡಿನ ಸ್ವಾಸ್ಥ್ಯ ಚಿಂತನೆಗಳಿವೆ; ಇಹದ ಸಾಮಾಜಿಕತೆಯಿದೆ; ವಿಜ್ಞಾನವೇ ತತ್ವಜ್ಞಾನವಾಗಿ, ಕಲೆಯಾಗಿ ಸಾಹಿತ್ಯದ ಮೂಲಕ ಅಭಿವ್ಯಕ್ತಗೊಳ್ಳುವ ಸೃಜನಶೀಲ ಅದ್ಭುತ ಕೌಶಲವಿದೆ. ವಿಜ್ಞಾನದ ಭೌತಿಕ ಅಚ್ಚರಿಗಳನ್ನು ಸಾಹಿತ್ಯಕ ಪರಿಭಾಷೆಯಲ್ಲಿ ಗ್ರಹಿಸಿ, ಸೃಜನಾತ್ಮಕವಾಗಿ

ಕಟ್ಟಿಕೊಡುವ ಬರಹಗಾರರೇ ಅಪರೂಪವಾಗಿರುವ ಸಂದರ್ಭದಲ್ಲಿ ವಿಜ್ಞಾನದ ಆಧುನಿಕ ಪರಿಕಲ್ಪನೆಗಳಿಗೆ ಪ್ರಾಕೃತಿಕ ನಿಗೂಢತೆಯ ಆವರಣ ಕಲ್ಪಿಸಿಕೊಡುವ ಅವರ ಬರವಣಿಗೆ ಅದ್ಭುತವಷ್ಟೇ ಅಲ್ಲ; ಚೇತೋಹಾರಿಯಾದುದು. ಅದಕ್ಕೆ ಸಾಮಾಜಿಕ ಆಯಾಮ ನಿರ್ಮಿಸುವಾಗಲೂ ತೇಜಸ್ವಿಯವರು ವಿಜ್ಞಾನದ ವಿನಾಶಕಾರೀ ಅಪಾಯಗಳಿಂದ ಸಮಾಜವನ್ನು ಪಾರುಗಾಣಿಸುವ ಅನನ್ಯ ಬಗೆಗಳನ್ನು ಚಿತ್ರಿಸುತ್ತಾರೆ. ನಿಸರ್ಗ ಮತ್ತು ಪರಿಸರದ ಭಿತ್ತಿಯಲ್ಲಿ ಸಾಹಿತ್ಯದ ಔನತ್ಯವನ್ನು ಹೇಗೆ ತಲುಪಬಹುದೆಂಬುದಕ್ಕೆ ಅವರಿಗೆ ಅವರೇ ಸರಿಸಾಟಿ ಮತ್ತು ಸಮರ್ಥ ನಿದರ್ಶನ.

ಕುವೆಂಪುರವರು 'ವಿಸ್ತಾರ' ಸ್ವರೂಪದಲ್ಲಿ ಮಲೆನಾಡಿನ ಕಾಡಿನ ಬದುಕನ್ನು, ಅಲ್ಲಿನ ಜೀವದುಲಿತಗಳನ್ನು ದಾಖಲಿಸಿದ್ದರೆ, ತೇಜಸ್ವಿಯವರು ಕಾಡುಬದುಕನ್ನು ಅದರೆಲ್ಲಾ ಸೂಕ್ಷ್ಮ ವಿವರಗಳೊಂದಿಗೆ 'ಸಾಂದ್ರತೆ'ಯಲ್ಲಿ ಹಿಡಿದುಕೊಡುತ್ತಾರೆ. ಅವರ ಬರವಣಿಗೆಯ ಹ್ರಸ್ವಗುಣ ಅವರ ಎಲ್ಲ ಕೃತಿಗಳಿಗೆ ಸಂಕೀರ್ಣ ಸ್ವರೂಪವನ್ನು ತಂದುಕೊಡುವುದರಿಂದ ಅವರ ಅಭಿವ್ಯಕ್ತಿ ಸಹಜವಾಗಿಯೇ ನಿಖರವೂ, ಧ್ವನಿಪೂರ್ಣವೂ ಆಗಿಬಿಡುತ್ತದೆ. 'ಅವನತಿ' ಕಥೆಯ ಗೌರಿ ಮತ್ತು ಸೂರಾಚಾರಿ ಪಾತ್ರಗಳು ಪದೇ ಪದೇ ನಮ್ಮ ನೆನಪಿಗೆ ಬರುತ್ತವೆ. ಸೌಂದರ್ಯವೇ ಛಂದೋಬದ್ಧವಾದಂತಹ ಗೌರಿಯ ನಿಲ್ಲುವ, ನಡೆಯುವ ಭಂಗಿ, ವಿನ್ಯಾಸಗಳು ಹೇಗಿದ್ದವೆಂದರೆ ಇನ್ನೇನು ಮಾಡಿಯೂ ಅವಳ ಸೌಂದರ್ಯವನ್ನು ಹೆಚ್ಚಿಸದಷ್ಟು ಅದ್ಭುತ ಸಾಮರಸ್ಯದಲ್ಲಿ ಮಿಳಿತವಾಗಿದ್ದವು. ಆದರೆ ಆ ಪರಿಸರದ ಯಾರಿಗೂ ಆ ಸೌಂದರ್ಯ ಸಾಕ್ಷಾತ್ಕಾರದತ್ತ ಗಮನವೇ ಇರಲಿಲ್ಲ ಎನ್ನುವುದೇ ದುರಂತ. ಹಾಗೆಯೇ ಸಕಲ ಶಿಲ್ಪಶಾಸ್ತ್ರ ಲಕ್ಷಣಗಳೊಂದಿಗೆ ಗೌರಿಯಂತಹದೇ ಪಡಿಯಚ್ಚನ್ನು ಕೆತ್ತಬಲ್ಲ ಮಹಾನ್ ಕಲಾವಿದನಾಗಿದ್ದವನು ಸೂರಾಚಾರಿ. ಗೌರಿಯನ್ನು ಅವಗಣಿಸಿದ ಕಣ್ಣುಗಳಿಗೆ ಸೂರಾಚಾರಿಯ ಶಿಲ್ಪಗಳಲ್ಲಿ ನ್ಯೂನತೆ ಕಂಡನಂತರ ಸೂರಾಚಾರಿ ಬಿಡುಗಣ್ಣು, ಕಿಸುಬಾಯಿ, ಮಡಕೆ ಮೊಲೆಗಳ ಮಾರಿಗೊಂಬೆಗಳನ್ನು ಕೋರೆ ಹಲ್ಲುಗಳ ಸಮೇತ ಮಾಡತೊಡಗಿದ. ಜೈವಿಕ ಹಾಗೂ ಕಲೆಯ ಮೂಲದ ಈ 'ಸಾಂಸ್ಕೃತಿಕ ಅವನತಿ' ತೇಜಸ್ವಿಯವರ ಯಾವುದೇ ಕಥಾನಕದ ಸ್ಥಾಯೀ ಭಿತ್ತಿಯಾಗಿದ್ದರೆ ಅಚ್ಚರಿಯೇನಿಲ್ಲ. ಗೌರಿಯ ನಡೆ, ನಗೆ, ನಿಲುವು.... ಹೀಗೆ ಆಕೆಯ ಒಂದೊಂದು ಚಲನೆಯಲ್ಲೂ ಅಡಗಿರುವ ಸೌಂದರ್ಯದ ಸಾಕ್ಷಾತ್ಕಾರಕ್ಕೆ, ಉಪಭೋಗವಾದದ ಗೀಳಿಗೆ ಸಿಕ್ಕಿ ಕುರುಡಾಗಿರುವ ಈ ವ್ಯವಸ್ಥೆ ಸೂರಾಚಾರಿಯಂತಹ ಸಹಜ ಕಲಾವಿದನಿಂದಲೂ ವಿಕೃತ ಮಾರಿಗೊಂಬೆಗಳನ್ನೇ ಬಯಸುತ್ತದೆ. ನಾವು ಕೂಡ ನಮ್ಮ ಸಾಂಸ್ಕೃತಿಕ ಪರಿಸರದೊಂದಿಗೆ ಇನ್ನೂ ಆಳದ ದುರಂತದತ್ತ ಜಾರುತ್ತಲೇ ಇದ್ದೇವೆ.

ಅಭಿಜಾತ ಸೌಂದರ್ಯ ಮೀಮಾಂಸೆಗೆ ಭೌತವಾದೀ ಭಾಷ್ಯ ಬರೆಯುತ್ತಿರುವ ಪೂಚಂತೇ ತಾತ್ವಿಕ ವಿನ್ಯಾಸದ ಹೊಸ ಆಕೃತಿಗಳನ್ನು ಕಟ್ಟಿಕೊಡುತ್ತಿದ್ದಾರೆ. ಭಾಷೆಯ ಮೂಲಕವೇ ಭಾಷಾತೀತವಾದುದನ್ನು ಅನ್ವೇಷಿಸುವ, ಶೋಧಿಸುವ ಹಾಗೂ ಕಲೆಯ ಪ್ರಯೋಗಗಳನ್ನು ನಡೆಸುವ ಛಾತಿ ತೋರಿರುವ ತೇಜಸ್ವಿಯವರ ಬರವಣಿಗೆಯಲ್ಲಿ ಅದರದೊಂದು ಪದ ಇಲ್ಲವೇ ಭಾವವನ್ನು ಪಲ್ಲಟಗೊಳಿಸಿ ಅಥವ ಇನ್ನೇನು ಮಾಡಿಯೂ ಬರವಣಿಗೆಯ ಸೌಂದರ್ಯವನ್ನು ಹೆಚ್ಚಿಸದಷ್ಟು ಅದ್ಭುತ ಸಾಮರಸ್ಯದ ಲೇಖಕರಾಗಿದ್ದಾರೆ. ಅವರ ಕಥೆಗಳು, ಕರ್ವಾಲೋ, ಚಿದಂಬರ ರಹಸ್ಯ, ಜುಗಾರಿ ಕ್ರಾಸ್, ಪರಿಸರದ ಕಥೆಗಳು, ಅನುವಾದಗಳು - ನೀವು ಯಾವುದನ್ನೇ ಓದುತ್ತಾ ಹೋದರೂ

ಗೌರಿಯ ಕಾಡುಚೆಲುವಿನ ಸಾಕ್ಷಾತ್ಕಾರವಾಗುತ್ತದೆ. ಹಾಗೆಯೇ ಜೀವಜಾಲವನ್ನು ಎರ್ರಾಬಿರ್ರಿ ಛಿದ್ರವಾಗಿಸುತ್ತಲಿರುವ ಅಸಹ್ಯ ಉಪಭೋಗವಾದದ ಅಪಾಯ, ಸೂಕ್ಷ್ಮ ದುರಂತಗಳೂ ಮನನಾಟುತ್ತವೆ.

ತೇಜಸ್ವಿಯುವರ ಕಥೆಕಾದಂಬರಿಗಳು ಬೇರೊಂದು ಮಾಧ್ಯಮಕ್ಕೆ ಭಾಷಾಂತರ ಗೊಳ್ಳುವುದಕ್ಕಿಂತಲೂ, ಆ ಮಾಧ್ಯಮದ ಅರ್ಥಸಾಧ್ಯತೆಯನ್ನೇ ವಿಸ್ತರಿಸಬಲ್ಲಂತೆ ಭಾಸವಾಗುತ್ತದೆ. ಅವರ ಕಥೆಗಳನ್ನಾಧರಿಸಿದ ನಾಟಕ, ಚಲನಚಿತ್ರಗಳಲ್ಲಿ ಬಹುಶಃ ಈ ಕಾರಣದಿಂದಾಗಿಯೇ ಇರಬಹುದು - ತೇಜಸ್ವಿಯ ಕಾಡಿನಧ್ಯಾನ ಹಾಗೂ ಗೌರಿಯ ಸಹಜ ಚೆಲುವಿನ ಸಾಕ್ಷಾತ್ಕಾರಗಳು ಗೈರು ಹಾಜರಾಗಿರುತ್ತವೆ. ಬರವಣಿಗೆಯ ಪ್ರಮಾಣಬದ್ಧ, ಸಾಮರಸ್ಯದ ಮಿಳಿತ ಹಾಗೂ ಕಲೆಯ ಸೂಕ್ಷ್ಮತೆಗಳು ಧ್ವನಿಹೀನವಾಗಿ ಬಿಡುತ್ತವೆ. ಆದರೂ ಅವುಗಳ ಪ್ರಯೋಗಶೀಲ ಸಾಧ್ಯತೆಗಳನ್ನು ಯಾರೂ ತಳ್ಳಿಹಾಕಲಾಗುವುದಿಲ್ಲ.

ವಿಜ್ಞಾನ ಮತ್ತು ನಿಸರ್ಗದ ದ್ವಂದ್ವಮಾನದ ಅಧ್ಯಯನಕ್ಕೆ ತೇಜಸ್ವಿ ಸಾಹಿತ್ಯ ಕುತೂಹಲದ ನೆಲೆಗಳನ್ನೀಯಬಲ್ಲದು. ಸಾಮಾಜಿಕ ಜೀವವಿಜ್ಞಾನದ ಚಿಂತನೆಯ ಕಲಾತ್ಮಕ ರೂಪಗಳು ತೇಜಸ್ವಿಯವರ ಒಟ್ಟು ಬರವಣಿಗೆಯ ಹಿಂದಿರುವುದನ್ನು ಈಗಾಗಲೇ ವಿಮರ್ಶಕರು ಗುರುತಿಸಿದ್ದಾರೆ. 'ಕರ್ವಾಲೋ' ಕಾದಂಬರಿ ಡಾರ್ವಿನ್ನನ ವಿಕಾಸವಾದದ ಸಿದ್ಧಾಂತವನ್ನೇ ಭಿತ್ತಿಯಾಗಿಸಿಕೊಂಡ ವಿಶಿಷ್ಟ ಕೃತಿ. ಹಾರುವ ಓತಿಯಂತೆಯೇ ವಿನಾಶದ ಅಂಚಿಗೆ ಬಂದಿರುವ ಸಹಜ ಜೀವ ವಿಜ್ಞಾನಿಗಳಾದ ಮಂದಣ್ಣ, ಎಂಕ್ಟ ಹಾಗೂ ಕರಿಯಪ್ಪನಂತಹವರೆಲ್ಲ ಸಾವಿರಾರು ವರ್ಷಗಳಿಂದಲೂ ಸಂಚಯನಗೊಂಡ ಪರಂಪರಾಗತ ದೇಸಿ ವಿಜ್ಞಾನದ ಪ್ರತಿಭಾವಂತರು. ಹಾಗಾಗಿಯೇ ಜೀವವಿಕಾಸ ಪ್ರಕ್ರಿಯೆಯಲ್ಲಿ ಹಾರುವ ಓತಿಗಿರುವ ಮಹತ್ವವನ್ನೇ ಕರ್ವಾಲೋರವರು ಮಂದಣ್ಣನಿಗೂ ನೀಡಿ ಗೌರವಿಸುತ್ತಾರೆ. ಬೆಳಕಿನ ಅಲೆ ಮತ್ತು ಕಣ ದ್ವಂದ್ವರೂಪ ಸಿದ್ಧಾಂತದ ಕ್ವಾಂಟಂ ಮೆಕಾನಿಕ್ಸ್‌ನ ಬೆಡಗಿನ ಬೆಳಕಲ್ಲಿ 'ಚಿದಂಬರ ರಹಸ್ಯ'ದ ಅನಂತ ಸತ್ಯಗಳನ್ನು ವಿವಿಧ ಪಾತ್ರಗಳ ಮೂಲಕ ಹೇಗೆ ಹೊಳೆಯಿಸಬಹುದೆಂಬುದನ್ನು ಈಗಾಗಲೇ ಕೆ. ಪುಟ್ಟಸ್ವಾಮಿಯವರು ಸಮರ್ಥ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ. (ವಿವರಗಳಿಗೆ : ಅನಿಕೇತನ-೫೧,೨೦೦೨ / ಪುಟ : ೬೯-೭೪) ವಸ್ತುವಿನ ದ್ವಂದ್ವರೂಪ ಸಿದ್ಧಾಂತವನ್ನಾಧರಿಸಿ, ಮನುಷ್ಯ ಪ್ರಜ್ಞೆ ಸ್ವತಂತ್ರವೋ ಅಥವ ನಿಯಮಗಳಿಗೆ ಅಧೀನವೋ ಎಂಬ ಪ್ರಶ್ನೆಯನ್ನೇ ಒಂದು ಪ್ರಯೋಗವಾಗಿಸಿ, ಕೆಸರೂರಿನ ದುರಂತಕ್ಕೆ, ಏಲಕ್ಕಿಯ ನಾಶಕ್ಕೆ ಉತ್ತರ ಶೋಧಿಸುತ್ತ ಹೋಗುವ ತೇಜಸ್ವಿಯವರು ಕೊನೆಗೆ ವಸ್ತುಸ್ಥಿತಿ ಎನ್ನುವುದು ಎಷ್ಟು ಸಾಪೇಕ್ಷವೆಂಬುದನ್ನು ತಿಳಿಯಾಗಿಸಿ, ಸತ್ಯವನ್ನು 'ಚಿದಂಬರ ರಹಸ್ಯ'ವಾಗಿಸುತ್ತಾರೆ. ರಫಿ-ಜಯಂತಿಯರೆದುರು ಕಾಡುತಳಿಯ ಏಲಕ್ಕಿ ಸಾಕ್ಷಾತ್ಕಾರವಾಗುವುದರೊಂದಿಗೆ ಹೊಸ ಭರವಸೆಯನ್ನೂ ಮೂಡಿಸುತ್ತಾರೆ.

ಡಿ. ಆರ್. ನಾಗರಾಜ್‌ರವರು ತೇಜಸ್ವಿಯವರ ವಿಜ್ಞಾನದ ಆರಾಧಕ ಧೋರಣೆ ಸ್ವಾರಸ್ಯಕರವಾದುದೆಂದು ಹೇಳಿದ್ದಾರೆ. ಆದರೆ ವಿಜ್ಞಾನದ ವಿಲಯಕಾರೀ ನಡೆಗಳಿಗೆ ತದ್ವಿರುದ್ಧ ದಿಕ್ಕಿನ ಈ ಧೋರಣೆ ವಿಜ್ಞಾನದ ತಾತ್ವಿಕ ಸ್ವರೂಪವನ್ನು ಯಾಂತ್ರಿಕ ನೆಲೆಗಳಲ್ಲಿ ಗ್ರಹಿಸದೆ ನಿಸರ್ಗದ ಕಣ್ಣಿಗೆ ಕಾಣದ ಚಲನೆಗಳಲ್ಲಿ ಹಿಡಿದು ತೋರುತ್ತಾರೆ. ಹಾಗೆಯೇ ಶರೀಪಜ್ಜರು ಗಿರಣಿಯ ವೈಜ್ಞಾನಿಕ

ತಾಂತ್ರಿಕತೆಯನ್ನೇ ದೈವೀಕರಿಸುವುದರಿಂದಲೂ ಈ ಧೋರಣೆ ಭಿನ್ನವಾದುದು. ಆದರೂ ಶರೀಪಜ್ಜರಂತೆಯೇ ತೇಜಸ್ವಿಯವರೂ ಸೃಜನಶೀಲ ಹುಡುಕಾಟದ ಜೀವಂತಿಕೆಯುಳ್ಳವರು.

ಪರಿಸರದ ಎಲ್ಲ ಮುಖಗಳ ಅವನತಿಯ ಶೋಧಗಳು ಪೂಚಂತೇರವರ ಒಟ್ಟು ಬರವಣಿಗೆಯ ಸ್ಥಾಯೀ ಭಿತ್ತಿಯಾಗಿರುವಂತೆಯೇ, ವಿಜ್ಞಾನಕ್ಕೂ ನಿಲುಕದ ನಿಗೂಢತೆಯ ತಾತ್ವಿಕ ಯಾನ ಅವರ ಬರವಣಿಗೆಯ ಸ್ಥಾಯೀ ಚಲನೆಯಾಗಿದೆ. ಮಾನವಕೋಟಿ ಚರಿತ್ರೆಯುದ್ದಕ್ಕೂ ತನ್ನ ಸಂದಿಗ್ಧಗಳಿಂದ ಪಾರಾಗಲು ಅಂತಿಮವಾಗಿ ನಿಸರ್ಗದತ್ತಲೇ ಮುಖಮಾಡುವಂತೆ ತೇಜಸ್ವಿ Back to nature ತತ್ವದ ಸರಳತೆಯನ್ನೇ ಉದ್ದಕ್ಕೂ ಪ್ರತಿಪಾದಿಸುತ್ತಾರೆ. ಮಾನವ ಪ್ರೇರಿತ ವಿಜ್ಞಾನದ ಎಲ್ಲ ವಿಲಯಕಾರೀ ಆತಂಕಗಳಿಗೂ 'Nature has it's own tricks' ಎಂಬ ಸಮಾಧಾನವನ್ನೂ ನೀಡುತ್ತಾರೆ.

ಕನ್ನಡ ಸಾರಸ್ವತ ಲೋಕದ ಹೆಮ್ಮೆಯಾಗಿರುವ ಪೂರ್ಣಚಂದ್ರ ತೇಜಸ್ವಿಯವರ ಕೃತಿಗಳ ಕುರಿತ ವಿಮರ್ಶೆ ಖಂಡಿತ ಇಲ್ಲಿ ಸಾಧ್ಯವಿಲ್ಲ; ಅದು ಸಾಧುವೂ ಅಲ್ಲ. ಕೇವಲ ಇದೊಂದು ಮೆಲುಕು ಮಾತ್ರ. ಈ ಮೆಲುಕಿಗೆ ನೆಪವಾದದ್ದು ಇತ್ತೀಚೆಗೆ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಪ್ರದರ್ಶನಗೊಂಡ ಅವರ ಹಕ್ಕಿಗಳ ಕುರಿತ ಛಾಯಾಚಿತ್ರ ಪ್ರದರ್ಶನ - 'ಹಾರಾಡುವ ಹಾಡುಗಳು'. ಬರವಣಿಗೆ, ಮೀನು ಶಿಕಾರಿಯಲ್ಲಿಂತೋ, ಛಾಯಾಗ್ರಹಣದಲ್ಲೂ ತೇಜಸ್ವಿಯವರದು ಅಷ್ಟೇ ಮಹತ್ವದ ಸಾಧನೆ. ಇದಕ್ಕೆ ನಿದರ್ಶನವಾಗಿ ಅವರ ಹಕ್ಕಿಗಳ ಕುರಿತ ಎರಡು ಛಾಯಾಚಿತ್ರಗಳನ್ನು ಈ ಬಾರಿಯ ಮುಖಪುಟಕ್ಕೆ ಬಳಸಿದ್ದೇವೆ.

ತೇಜಸ್ವಿಯವರೇ ಬರೆದಿದ್ದ ಒಂದು ಜನಪದ ಕಥೆ ಹೀಗಿದೆ: ಮರಕುಟಿಗನ ಹಕ್ಕಿಯ ಮರ ಕುಟ್ಟುವ ನಿರಂತರ ಲಯ ಕೇಳಿ ಕುತೂಹಲಿಯಾಗಿ ಅಲ್ಲಿಗೆ ಬರುವ ಶಿವ ಆ ಲಯಕ್ಕೆ ಅನುಗುಣವಾಗಿ ನರ್ತಿಸತೊಡಗುತ್ತಾನೆ. ಕೊನೆಕೊನೆಗೆ ಆ ಹಕ್ಕಿಯ ಲಯತೀವ್ರತೆಗೆ ತಕ್ಕಂತೆ ಕುಣಿಯಲಾಗದೆ ಸೋಲುವ ಶಿವನ ಕುರಿತ ಈ ಜಾನಪದ ಕಥೆಯ ಮೂಲಕ ತೇಜಸ್ವಿ ನಟರಾಜನ ಲೋಕ ವಿಖ್ಯಾತವೂ, ಆಕಾಶ-ಪಾತಾಳಗಳನ್ನು ಒಂದುಮಾಡುವ ವಿಲಯ ತಾಂಡವ ನೃತ್ಯಕ್ಕಿಂತಲೂ, ಒಂದು ಪುಟ್ಟ ಹಕ್ಕಿಯ ಛಲದ ಶಕ್ತಿಯ ಹೆಚ್ಚುಗಾರಿಕೆ ಕಾಣಿಸಿ, ಇಹದ ಮಹದ, ಭೌತವತ್ತ್ಯುಚ್ಚ ನಿಸರ್ಗದ ಬೆರಗನ್ನೇ ಎತ್ತಿಹಿಡಿಯುತ್ತಾರೆ. ಅವರ ಕಥೆಗಳಲ್ಲಿ ಛಾಯಾಚಿತ್ರಗಳನ್ನೂ, ಛಾಯಾಚಿತ್ರಗಳಲ್ಲಿ ಕತೆಗಳನ್ನು ನಾವು ನೋಡಬಹುದಾಗಿದೆ. ಛಾಯಾಚತ್ರ ಪ್ರದರ್ಶನದ ಸಂದರ್ಭದಲ್ಲಿ ಪ್ರಕಟಿಸಲಾಗಿದ್ದ ಬ್ರೋಷರ್‌ನಲ್ಲಿನ ಅರ್ಥಪೂರ್ಣ ಮಾತುಗಳನ್ನು ಕೂಡ ನಾವು ಇಲ್ಲಿ ಯಥಾವತ್ತು ದಾಖಲಿಸುತ್ತಿದ್ದೇವೆ:

'ಹಕ್ಕಿಗಳು ನಮ್ಮ ಪರಿಸರದ ಅತ್ಯಂತ ಸೂಕ್ಷ್ಮಜೀವಿಗಳೆಂದು ಪರಿಸರ ವಿಜ್ಞಾನಿಗಳು ಪರಿಗಣಿಸುತ್ತಾರೆ. ವಾಯು, ಜಲ ಮತ್ತು ಭೂಮಿಯ ನೈರ್ಮಲ್ಯ ಕೆಟ್ಟು ವಿಷವಾಗಲು ಶುರುವಾದರೆ ನಮ್ಮ ಅರಿವಿಗೆ ಬರುವುದಕ್ಕೆ ಮೊದಲೇ ಹಕ್ಕಿಗಳ ಅರಿವಿಗೆ ಬರುತ್ತದೆ. ಆದ್ದರಿಂದಲೇ ಪರಿಸರ ವಿಜ್ಞಾನಿಗಳು ವಾತಾವರಣಕ್ಕೆ ಹಕ್ಕಿಗಳ ಪ್ರತಿಕ್ರಿಯೆಯನ್ನು ಎಚ್ಚರದಿಂದ ಗಮನಿಸುತ್ತಾರೆ. ಅವುಗಳ ಭಾಷೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ಹಕ್ಕಿಗಳು ನಮ್ಮ ಸುತ್ತಮುತ್ತ ಅಕ್ಕಪಕ್ಕ ಚಿಲಿಪಿಲಿಗುಟ್ಟುತ್ತಾ ಎಷ್ಟು ಹೆಚ್ಚು ಇರುತ್ತವೋ ಅಷ್ಟು ನಮ್ಮ ಪರಿಸರ ಆರೋಗ್ಯಕರವಾಗಿದೆ ಎಂದು ಹೇಳಬಹುದು. ಈ ಹಕ್ಕಿಗಳಲ್ಲಿ ಬಹಳಷ್ಟು ವಿಪರೀತ ಸಂಕೋಚ ಸ್ವಭಾವದವು. ಪಕ್ಷಿ ವೀಕ್ಷಣೆಯ

ಪರಿಣತರಿಗಲ್ಲದೆ ಇತರರಿಗೆ ಅವು ನೋಡಲು ಸಿಕ್ಕುವುದೂ ಕಷ್ಟ. ಇದರಿಂದಾಗಿ ಅವುಗಳು ವಿನಾಶದ ಹಾದಿಯಲ್ಲಿವೆಯೋ ವೃದ್ಧಿಯಾಗುತ್ತಿವೆಯೋ ಹೇಳುವುದು ತುಂಬಾ ಕಷ್ಟ. ಇಂಥ ಪರಿಸ್ಥಿತಿಯಲ್ಲಿ ನಮಗೆ ಅರಿವೇ ಇಲ್ಲದೆ ಹಲವು ಜಾತಿಯ ಹಕ್ಕಿಗಳು ಅವಸಾನ ಹೊಂದಬಹುದು. ಹಕ್ಕಿಗಳ ಬಗ್ಗೆ ಅನುಕಂಪ, ಕುತೂಹಲ, ಆಸಕ್ತಿಗಳನ್ನು ಎಲ್ಲರೂ ಬೆಳೆಸಿಕೊಂಡರೆ ಮಾತ್ರ ನಾವು ಈ ಪರಿಸ್ಥಿತಿಯನ್ನು ಎದುರಿಸಲು ಸಾಧ್ಯವಾಗುತ್ತದೆ.

ನಾವು ಹಕ್ಕಿಗಳ ಪರಿಸರವನ್ನು ನಾಶಮಾಡಿ ಅವುಗಳ ಬದುಕುವ ಹಕ್ಕನ್ನು ಕಸಿದುಕೊಂಡರೆ ಅವಕ್ಕೆ ನಮ್ಮಂತೆ ಮಾತಾಡಲು ಬರುವುದಿಲ್ಲ, ಅವು ತಮಗಾಗುತ್ತಿರುವ ಅನ್ಯಾಯದ ವಿರುದ್ಧ ಕೋರ್ಟಿಗೆ ಹೋಗಲಾರವು, ಅವಕ್ಕೆ ಓಟಿನ ಹಕ್ಕೂ ಇಲ್ಲ. ಅವು ನಮ್ಮತ್ತ ನಿಸ್ಸಹಾಯಕ ಮುಗ್ಧನೋಟ ಬೀರಿ ನಿರ್ಗಮಿಸುತ್ತವೆ, ಕೆಲವೊಮ್ಮೆ ಶಾಶ್ವತವಾಗಿ. ಅವುಗಳ ನಿರ್ಗಮನ ನಮ್ಮ ನಿರ್ಗಮನದ ಮುನ್ನುಡಿಯಷ್ಟೇ! ಏಕೆಂದರೆ ಅವು ಬದುಕಲಾರದ ಪರಿಸರದಲ್ಲಿ ನಾವೂ ಬದುಕಲಾಗುವುದಿಲ್ಲ. ನಮ್ಮ ಅಧಿಕಾರಶಾಹಿ, ರಾಜಕಾರಣಿಗಳು, ಯೋಜನಾ ತಜ್ಞರು ಎಲ್ಲ ಅಭಿವೃದ್ಧಿಯ ಬಗ್ಗೆ ಹಳೆಯ ದೃಷ್ಟಿಕೋನದವರೇ ಆಗಿರುವುದರಿಂದ ನಮ್ಮ ಸುತ್ತಮುತ್ತ ಸಂಭವಿಸುತ್ತಿರುವ ಪರಿಸರ ನಾಶವನ್ನು ತಡೆಗಟ್ಟಲು ಸಾಧ್ಯವಾಗಿಲ್ಲ. ಪರಿಸರ ಸಂರಕ್ಷಣೆಗಾಗಿ ಕಾನೂನುಗಳು, ಚಳವಳಿಗಳು, ಪ್ರತಿಭಟನೆ, ಮೊದಲಾದ ಘರ್ಷಣೆಯ ಮಾರ್ಗಗಳಿಗಿಂತ ಮಕ್ಕಳಿಗೂ ತರುಣರಿಗೂ ಪರಿಸರದ ಬಗ್ಗೆ ಕುತೂಹಲ, ಶ್ರದ್ಧೆ, ಆಸಕ್ತಿ ಉದಿಸುವಂತೆ ಮಾಡುವುದು ಹೆಚ್ಚು ಪರಿಣಾಮಕಾರಿಯಾದ ಮಾರ್ಗವೆಂಬುದು ನಮ್ಮ ನಂಬಿಕೆ. ಕೊನೆಯ ಪಕ್ಷ ಇನ್ನು ಏಳೆಂಟು ವರ್ಷಗಳಿಗಾದರೂ ಹೊಸ ಆದರ್ಶ, ಧ್ಯೇಯ ಧೋರಣೆಗಳನ್ನುಳ್ಳ ಪರಿಸರ ಸ್ನೇಹಿಯಾದ ಹೊಸ ತಲೆಮಾರೊಂದು ಈ ದೇಶದಲ್ಲಿ ರೂಪುಗೊಳ್ಳಲು ಇದರಿಂದ ಸಹಾಯವಾಗಬಹುದು.'

ಈ ಸಂಚಿಕೆಯೂ ನಿಮಗೆ ಇಷ್ಟವಾಗಬಹುದೆಂದು ಆಶಿಸಿದ್ದೇವೆ.

*– ಸಂಪಾದಕರು*

# ಪರಿವಿಡಿ

## ಭಾಗ - ೧

ಭಾಗ - ೨

# ಡಾ। ಹರಿವಂಶ್ ರಾಯ್ ಬಚ್ಚನ್

## ಜನನ : ೨೭.೧೧.೧೯೦೭ ಕಾವ್ಯೈಕ್ಯ : ೧೮.೧.೨೦೦೩

ಇಟಗಿ ಈರಣ್ಣ

ಆಧುನಿಕ ಹಿಂದೀ ಸಾಹಿತ್ಯದಲ್ಲಿ ಹಾಡುಗಬ್ಬದ ಶ್ರೇಷ್ಠ ಕವಿಯಾಗಿ ಶ್ರೀಸಾಮಾನ್ಯರ ಹೃದಯದಲ್ಲೂ ರಾರಾಜಿಸಿದ ಮಹಾಕವಿ ಡಾ। ಹರಿವಂಶ್ ರಾಯ್ ಬಚ್ಚನ್. ಆಧುನಿಕ ಹಿಂದೀ ಕಾವ್ಯ ಸಾಹಿತ್ಯಕ್ಕೆ ನವಚೈತನ್ಯವನ್ನು ತುಂಬಿದ ಮಹಾಕವಿ. ಕವಿ ಸಮ್ಮೇಳನಗಳ ವೇದಿಕೆಯಲ್ಲಿ ತಮ್ಮ ಕವಿತೆಗಳನ್ನು ಜನಪ್ರಿಯತೆಯ ಉತ್ತುಂಗ ಶಿಖರಕ್ಕೇರಿಸಿದ ಜನಪ್ರಿಯ ಕವಿ. ಛಾಯಾವಾದಿ ಕಲ್ಪನೆಗಳ ಕಾಮನಬಿಲ್ಲಿನ ಆವರಣದಲ್ಲಿದ್ದ ಕವಿತೆಯನ್ನು, ಜನಮಾನಸದ ಆಡುಂಬೊಲದಲ್ಲಿ ನರ್ತಿಸುವಂತೆ ಮಾಡಿದ ಕವಿ. ಕವಿತೆಗೆ ಭಾಷೆಯ ನೇರ, ಸರಳ ಹಾಗೂ ಸಹಜ ಗುಣಗಳನ್ನು ತುಂಬಿ, ಜನಜೀವನವನ್ನು ಉತ್ಸಾಹದ ಅಲೆಗಳ ಮೇಲೆ ತೇಲಿಸಿದ ಕವಿ. ತಮ್ಮ ಆತ್ಮಕಥೆಯನ್ನು ಗದ್ಯದಲ್ಲಿ ಬರೆದರೂ ಕಾವ್ಯದ ಸೊಗಡಿನಿಂದ ಗದ್ಯವನ್ನೂ ಝೇಂಕರಿಸುವಂತೆ ಮಾಡಿದ ಕವಿ. ಬದುಕಿನ ಎಲ್ಲ ಆಯಾಮಗಳೂ ಅವರ ಲೇಖನಿಯಿಂದ ಜನಮಾನಸದ ಹಾಳೆಯ ಮೇಲೆ ಇಳಿದು, ನಲಿದು, ನರ್ತಿಸಿದವು.

ಛಾಯಾವಾದೋತ್ತರ ಕವಿತೆಗಳ ಜನಪ್ರಿಯ ಕವಿ ಡಾ। ಹರಿವಂಶ್ ರಾಯ್ ಬಚ್ಚನ್‌ರ ಜನ್ಮ ೧೯೦೭ರ ನವೆಂಬರ್ ೨೭ ರಂದು, ಪ್ರಯಾಗದ ಓಮಡಾ ಎಂಬ ಹಳ್ಳಿಯ ಒಂದು ಮಧ್ಯಮ ಸಾಧಾರಣ ಕುಟುಂಬದಲ್ಲಾಯ್ತು. ೨೦೦೩ರ ಜನವರಿ ೧೮ರ ಶನಿವಾರ ರಾತ್ರಿ ೧೦.೪೦ಕ್ಕೆ ಮುಂಬೈಯ ಆಸ್ಪತ್ರೆಯೊಂದರಲ್ಲಿ ಉಸಿರಾಟದ ತೊಂದರೆ ಕಾರಣವಾಗಿ ತಮ್ಮ ೯೬ನೇ ವಯಸ್ಸಿನ ಹೊಸ್ತಿಲಲ್ಲಿ ಅವರು ಕಾವ್ಯೈಕ್ಯರಾದರು.

ಪ್ರಯಾಗದ ಸರಕಾರಿ ಶಾಲೆ ಹಾಗೂ ಕಾಯಸ್ಥ ಪಾಠಶಾಲೆಯಲ್ಲಿ ಅವರು ತಮ್ಮ ಪ್ರಾರಂಭಿಕ ವಿದ್ಯಾಭ್ಯಾಸವನ್ನು ಪೂರೈಸಿದರು. ಮುಂದೆ ೧೯೩೦ರಲ್ಲಿ ನಡೆದ ಅಸಹಕಾರ ಆಂದೋಲನದಲ್ಲಿ ಭಾಗಿಗಳಾದ, ಕ್ರಾಂತಿಕಾರಿಗಳ ಸಹಯೋಗಕ್ಕಾಗಿ, ಪ್ರಯಾಗ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದ ತಮ್ಮ ಎಂ.ಎ., ಪದವಿ ಅಭ್ಯಾಸಕ್ಕೆ ಶರಣು ಹೊಡೆದರು. ಬದುಕಲಿಕ್ಕಾಗಿ 'ಚಾಂದ್' ಮಾಸ

ಪತ್ರಿಕೆಯ ಕಾರ್ಯಾಲಯದಲ್ಲಿ ಪತ್ರಕರ್ತರಾದರು. ತರುವಾಯ 'ಮದಾರಿ ಹಾಸ್ಯ' ಪಾಕ್ಷಿಕ ಪತ್ರಿಕೆಯ ಸಂಪಾದಕರಾಗಿ, ನಂತರ 'ಪಯೊಸಿಯರ್' ದೈನಿಕಕ್ಕೆ ಬಂದರು.

ತಮ್ಮ ಮೊದಲ ಪತ್ನಿ 'ಶಾಮಾ'ಳ ಸಾವಿನ ನಂತರ, ಇಲಾಹಾಬಾದ್ ವಿಶ್ವವಿದ್ಯಾಲಯಕ್ಕೆ ಬಂದು ಅಲ್ಲಿ ಪುನಃ ಎಂ.ಎ., ಅಧ್ಯಯನದಲ್ಲಿ ತೊಡಗಿ, ಎಂ.ಎ., ಪದವಿಯನ್ನು ಪಡೆದರು. ಎರಡು ವರ್ಷ ಸಂಶೋಧಕರಾಗಿ, ಹನ್ನೊಂದು ವರ್ಷ ಅಧ್ಯಾಪನ ವೃತ್ತಿಯಲ್ಲಿ ತೊಡಗಿ, ತದನಂತರ ಇಂಗ್ಲೆಂಡಿನ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಿಂದ "W.B. Yeats and Occultism" ಎಂಬ ತಮ್ಮ ಶೋಧ ಪ್ರಬಂಧಕ್ಕೆ ೧೯೬೫ರಲ್ಲಿ ಪಿ.ಎಚ್.ಡಿ. ಪದವಿಯನ್ನು ಸಂಪಾದಿಸಿಕೊಂಡರು. ಕೇಂಬ್ರಿಜ್‌ನಿಂದ ಹಿಂತಿರುಗಿದ ಅವರು ಇಲಾಹಾಬಾದ್ ಆಕಾಶವಾಣಿಯಲ್ಲಿ ವೃತ್ತಿಯನ್ನು ಕೈಕೊಂಡರು. ಅಲ್ಲಿಯೂ ಹಿಂದೀ ಸಾಹಿತ್ಯ ಸೃಷ್ಟಿಯನ್ನೇ ತಮ್ಮ ಪ್ರವೃತ್ತಿ ಹಾಗೂ ಜೀವನ ಧ್ಯೇಯವನ್ನಾಗಿ ಮಾಡಿಕೊಂಡರು. ಕಾವ್ಯರಚನೆ ಅವರ ಜೀವನದ ಅವಿಭಾಜ್ಯ ಅಂಗವಾಗಿತ್ತು.

ತಮ್ಮ ಬದುಕಿನ ೨೨ರ ಹರೆಯದಲ್ಲಿ ಅವರ ಪ್ರಥಮ ಕಾವ್ಯ ಸಂಕಲನ "ತೇರಾಹಾರ್" ಪ್ರಕಟವಾಗಿತ್ತು. ಈ ಸಂಗ್ರಹದಿಂದ ಅವರಿಗೆ ಕವಿ ಪಟ್ಟ ಸಿಗದೇ ಹೋದರೂ ಭಾವೀ ಶ್ರೇಷ್ಠ ಕವಿಯ ದರ್ಶನ ಎಲ್ಲರಿಗೂ ಆಯಿತು. ೧೯೩೩-೩೪ರ ಸುಮಾರಿಗೆ ಅವರ "ಮಧುಶಾಲಾ"ದ ಹಸ್ತಪ್ರತಿ ಸಿದ್ಧವಾಯ್ತು. ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಕವಿ ಸಮ್ಮೇಳನದ ವೇದಿಕೆಯಿಂದ "ಮಧುಶಾಲಾ" ವಾಚನವಾದಾಗ, ಆ ಎಲ್ಲ ಸಾಲುಗಳೂ ಸಾಲು ಸಾಲಾಗಿ ಯುವಕರ ತುಟಿಯ ಮೇಲೆ ಪುಟಿದು, ನಾಲಗೆಯ ಮೇಲೆ ನರ್ತಿಸಿ, ಹೃದಯವನ್ನು ಸೂರೆಗೊಳ್ಳತೊಡಗಿದವು. ೧೯೩೫ರಲ್ಲಿ ಮಧುಶಾಲಾ ಪ್ರಪ್ರಥಮವಾಗಿ ಪ್ರಕಟಗೊಂಡಿತು. ಕಾವ್ಯ ಲೋಕಕ್ಕೆ ಕಾವ್ಯದ ಹುಚ್ಚು-ಕಿಚ್ಚುಗಳೆರಡನ್ನೂ ಹಚ್ಚಿತು! ಇದುವರೆಗೂ ೨ ಲಕ್ಷಕ್ಕಿಂತಲೂ ಹೆಚ್ಚು ಪ್ರತಿಗಳು ಮಾರಾಟವಾಗಿವೆ. "ಮಧುಶಾಲಾದ ಮಾದಕತೆ ಅಕ್ಷಯವಾದದ್ದು" - ಎಂದು 'ಪಂತ್' ಅವರು ಎದೆತುಂಬಿ ಹೇಳಿದ್ದಾರೆ.

ಮಧುಶಾಲೆಯಲ್ಲಿ ಹಾಲಾ, ಪಾಲಾ, ಸಾಕೀಬಾಲ್ ಮತ್ತು ಮಧುಶಾಲಾಗಳೆಂಬ ನಾಲ್ಕು ಪ್ರತೀಕಗಳನ್ನು ಬಳಸಿಕೊಂಡು ಈ ಕವಿ ಅನೇಕ ಕ್ರಾಂತಿಕಾರಕ-ಮರ್ಮಸ್ಪರ್ಶಿ-ರಾಗಾತ್ಮಕ- ಹಾಗೂ ರಹಸ್ಯಾತ್ಮಕ ಭಾವಗಳಿಗೆ ಅಭಿವ್ಯಕ್ತಿ ನೀಡಿದರು. ತನ್ನ ಮದಮಾದಕತೆಯಲ್ಲಿ ಎಂಥವರನ್ನೂ ಮುಳುಗಿಸಿ ತೇಲಿಸುವ ಗುಣ ಈ 'ಮಧುಶಾಲಾ" ಕೃತಿಯಲ್ಲಿದೆ.

'ಮಧು' ಹಾಗೂ 'ಮದಿರೆ'ಗಳನ್ನು ಪ್ರತೀಕವಾಗಿಸಿಕೊಂಡ ಅವರ ಇನ್ನೆರಡು ಕೃತಿಗಳೆಂದರೆ ಮಧುಬಾಲಾ ಹಾಗೂ ಮಧುಕಲಶ್-ಗಳು. ಪ್ರತೀಕಗಳನ್ನ ಅರ್ಥಮಾಡಿಕೊಳ್ಳದ ಜನರಿಂದ ಬಚ್ಚನ್‌ರಿಗೆ ಬೈಗುಳಗಳಷ್ಟೇ ಅಲ್ಲ, ಜೀವ - ಬೆದರಿಕೆಗಳೂ ಬಂದೆರಗಿದವು! ಅವರನ್ನೊಬ್ಬ ಮಹಾಕುಡುಕನೆಂದೇ ಚಿತ್ರಿಸಿ ದೂಷಿಸಲಾಯ್ತು. ಅವರ 'ಪ್ರತೀಕ ರಹಸ್ಯ' ರಹಸ್ಯವಾಗಿಯೇ ಉಳಿಯಿತು. ಅದಕ್ಕೆ ಕಾರಣವೂ ಇತ್ತು. ಆಗಿನ ಅವರ ಸುತ್ತಲಿನ ಕವಿತೆಗಳೆಲ್ಲ ಸ್ವಾದೀನತಾ ಸಂಗ್ರಾಮದಲ್ಲಿ ತಮ್ಮನ್ನು ಪೂರ್ಣ ತೊಡಗಿಸಿಕೊಂಡು, ಬಲಿದಾನ, ಸಂಘರ್ಷಗಳ ಮಂತ್ರೋಚ್ಚಾರಣೆಯಲ್ಲಿ ತೊಡಗಿದಾಗ, ಇವರು ರಮ್ಯ ರಸಮಯ ಗೀತೆಗಳನ್ನು ರಚಿಸಿ ಸಿಂಚನಗೈಯತೊಡಗಿದ್ದರು. ಈ ಹಿನ್ನೆಲೆಯಲ್ಲಿಯೇ ತಮ್ಮ 'ಮಧುಜ್ವಲಾ' ಕೃತಿಯಲ್ಲಿ ಹಿಂದಿಯ ಮಹಾಕವಿ ಸುಮಿತ್ರಾ ನಂದನ್ ಪಂತ್‌ರವರು:

ಅಲ್ಲಿ ಮೇಲೆ ಆಗಸದಲ್ಲಿ ನಡೆದಿತ್ತು ಗುಡುಗು ಸಿಡಿಲಿನ ಆರ್ಭಟ!

ಇಲ್ಲಿ ಜೀವನ ವಾರಿಧಿಯಲ್ಲಿ ಕರ್ಕಶ ಕಲ್ಲೋಲ ಮಾಲೆಗಳ ಆರ್ಭಟ!
ಹೃದಯದಿ ಅಮೃತ ಕೊರಳಲಿ ಗರಳ ಧರಿಸಿ ಅಧರದೊಳು ಮಧುವ
ಭುವನದ ಜನಮನ ವೀಣೆಯ ಮೀಟುತ ಹಾಡಿದ ನಾಗ ಈ ಮಹಾಭಟ! (ಅನು. ಇ. ಈ)

..... ಹೀಗೆ ಹರಿವಂಶ್‌ರಾಯ್ ಬಚ್ಚನ್‌ರನ್ನು ಹಾಡಿ ಹೊಗಳಿದ್ದರು.

ಆರೋಪ ಹಾಗೂ ವಿವಾದಗಳ ಸುಳಿಗೆ ಸಿಕ್ಕಾಗಲೂ ಅವರು ನಿಶ್ಚಿಂತರಾಗಿ ಶುದ್ಧ ಕಾವ್ಯವನ್ನು ಸೃಷ್ಟಿಸುವಲ್ಲಿ ತನ್ಮಯರಾಗಿರುತ್ತಿದ್ದರು. ಇದು ಅವರ ಬಲವೂ ಹೌದು; ದೌರ್ಬಲ್ಯವೂ ಹೌದು.

ಮಧುಶಾಲಾದಂತೆಯೇ ಅವರ ಆತ್ಮಕತೆ 'ಕ್ಯಾಭೂಲೂಂ? ಕ್ಯಾಯಾದ್ ಕರೂಂ?' (= ಏನ ಮರೆಯಲಿ? ಏನ ನೆನೆಯಲಿ?) ಕೂಡಾ ಜನಪ್ರಿಯತೆಯ ಉತ್ತುಂಗವನ್ನು ಕಂಡ ಕೃತಿ. ಇಲ್ಲಿ ಬಚ್ಚನ್‌ರ ಗದ್ಯ ಹಿಂದೀಗದ್ಯ ಸಾಹಿತ್ಯಕ್ಕೆ ಒಂದು ಹೊಸ ಆಯಾಮವನ್ನೇ ನೀಡಿತು. ಕಾವ್ಯಕ್ಕಿಂತ ಅವರ ಈ ಗದ್ಯ ಅತ್ಯಂತ ಶ್ರೇಷ್ಠವಾಗಿದೆ. ಮತ್ತೇರಿಸುವ ಗುಣ ಅವರ ಗದ್ಯಕ್ಕೂ ಇದೆ. ಜಗತ್ತನ್ನೇ ಮರೆಸಿ, ತನ್ನನ್ನು ಓದಿಸಿಕೊಳ್ಳುವ ಗುಣ ಅವರ ಈ ಗದ್ಯಕ್ಕಿದೆ. ಅತ್ಯಂತ ಶ್ರೀಸಾಮಾನ್ಯನಾಗಿ ಬಚ್ಚನ್ ಅವರು ತಮ್ಮ ಆತ್ಮಕಥೆಯಲ್ಲಿ ಅಭಿವ್ಯಕ್ತವಾಗುತ್ತಾರೆ. ತಮ್ಮ ಕೆಳಸ್ತರದ ಮಧ್ಯಮ ವರ್ಗದ ಜೀವನ ಸಂಘರ್ಷ, ಬದುಕಿನ ನಾನಾ ಮುಖಗಳಲ್ಲಿ ಅರಳಿದ ಅವರ ಪ್ರತಿಭೆ, ಬದುಕಿನ ಅವರ ಉತ್ಸಾಹ ಹಾಗೂ ಪ್ರೀತಿಗಳೆಲ್ಲವೂ ಅತ್ಯಂತ ಸಂಭ್ರಮದಿಂದ ಪ್ರಿಯತಮನೆದುರಿಗೆ ಪ್ರಿಯತಮೆಯಂತೆ ತಾವೇ ತಾವಾಗಿ ನಗ್ನಗೊಂಡು ನಿರಾಡಂಬರಗೊಳ್ಳುತ್ತವೆ.

ಹಿಂದೀ ಸಾಹಿತ್ಯದ ಚಿರತಾರೆಯಾಗಿ ಅವರು ಮಿನುಗುತ್ತಿರುವುದಕ್ಕೆ ಕಾರಣ ಅವರ ಬರಹಗಳಲ್ಲಿ ಅಡಗಿದೆ. ಅವರ ಬರಹದಲ್ಲಿ ಬದುಕು ಹಾಗೂ ಬದುಕಿನಲ್ಲಿ ಬರಹ ಬೇರಲ್ಲದಂತೆ ಬೆರೆತಿವೆ. ಎರಡರಲ್ಲೂ ನಿರಾಡಂಬರವೇ ಆಡಂಬರವಾಗಿದೆ. ಸಾಹಿತ್ಯದ ಗಂಧವಿಲ್ಲದವರನ್ನೂ ತನ್ನತ್ತ ಆಕರ್ಷಿಸುವ ಮಾಂತ್ರಿಕ-ಮೋಹಕ-ಮಾದಕತೆಯನ್ನು ಅವರ ಲೇಖನಿ ಸಹಜವಾಗಿಯೇ ಪಡೆದುಕೊಂಡಿದೆ.

೪೦ಕ್ಕೂ ಮಿಕ್ಕಿದ ಅವರ ಬಹುಮುಖೀ ಕೃತಿಗಳಲ್ಲಿ ಕೇವಲ ಒಂದೇ ಒಂದು ಕೃತಿಯನ್ನು, ತನ್ಮೂಲಕ ಕೃತಿಕಾರನನ್ನೂ ಕನ್ನಡಕ್ಕೆ ಪರಿಚಯಿಸುವ ಭಾಗ್ಯ ನನ್ನದಾಗಿದೆ. ಈ ಬಗ್ಗೆ ನನಗೆ ತೃಪ್ತಿ, ಸಂತೋಷ ಹಾಗೂ ಹೆಮ್ಮೆಗಳಿವೆ.

## ಸಲುಗೆ ಬಿನ್ನಪ

೧. ಹಾಲಾ : ಸುರಾ, ಸುರೆ, ಮಧು, ಹೆಂಡ. ಇಲ್ಲಿ 'ಹೆಂಡ'ವೆಂಬ ಶಬ್ದಕ್ಕೆ 'ಹಾಲಾ' ಎಂದು ಕರೆದಿರುವಲ್ಲಿ ವೈಶಿಷ್ಟ್ಯವಿದೆ. ಕನ್ನಡದಲ್ಲಿ 'ಹಾಲಾ', 'ಹಾಲು' ಎಂಬ ಶಬ್ದವನ್ನು ಕಿವಿಗುಂಟುಮಾಡಿ, ಇನ್ನೂ ವಿಶೇಷತೆಯನ್ನುಂಟುಮಾಡುತ್ತದೆ. ಈ 'ಹಾಲಾ' 'ದ್ರಾಕ್ಷಾರಸ'ವೇ ಹೊರತು ಮತ್ತಾವುದರ ರಸವೂ ಅಲ್ಲ. ಇದು ದ್ರಾಕ್ಷಾಪಾಕ! ಇದುವೇ ಸುಧೆ! ಇದುವೇ ಅಮೃತ! ಇದುವೇ ತತ್ವರಸ! ಸಂದರ್ಭಕ್ಕೆ ತಕ್ಕಂತೆ ಇದು ನಾನಾ ಅರ್ಥಗಳನ್ನು ಕೊಡುವುದನ್ನೂ ಸಹ ನೀವು ಗಮನಿಸುತ್ತೀರಿ-ಎಂದು ನನ್ನ ಬಲವಾದ ನಂಬುಗೆ.

೨. ಪ್ಯಾಲಾ : ಗಿಂಡಿ, ಹೆಂಡದ ಬಟ್ಟಲು, ಮಧುಪಾತ್ರೆ. "ತತ್ವರಸ"ಕ್ಕೆ ಇದುವೇ ಆಶ್ರಯ ಸ್ಥಾನ! = ವೇದ-ಪುರಾಣ-ಕುರಾನ್-ಬೈಬಲ್-ಗೀತೆ-ಇತ್ಯಾದಿಗಳು! ಮತ್ತು ಗುರುವಿನ 'ಅರಿವು' ಹಾಗೂ 'ಬುದ್ಧಿ' ಇತ್ಯಾದಿಯೂ ಹೌದು.

೩. ಸಾಕೀ : ಇವಳು ಹೆಂಡದಂಗಡಿಯಲ್ಲಿ ಹೆಂಡವನ್ನು ಪ್ರತಿಯೊಬ್ಬರಿಗೂ ಹಣಿಸುವಾಕೆ, ಹಂಚುವಾಕೆ, ಅಂದರೆ, "ತತ್ವರಸ"ವನ್ನು ಪ್ರತಿಯೊಬ್ಬರಿಗೂ ಕುಡಿಯಲು ಕೊಡುವ "ಗುರು". ಮತ್ತೂ ಕೆಲವೊಮ್ಮೆ "ಅಂತರಂಗದ ಅರಿವು". ಏಕೆಂದರೆ "ಅರಿವೇ ಗುರು". ಇದಲ್ಲದೆ, ಜೀವನಕ್ಕೆ ಸಂಬಂಧಿಸಿದ ಇನ್ನೂ ನಾನಾ ಸಂಕೇತಳಾಗಿ "ಈಕೆ" ಇಲ್ಲಿದ್ದಾಳೆ.

೪. ಮಧುಶಾಲಾ : ಹೆಂಡದ ಅಂಗಡಿ=ತತ್ವಜ್ಞಾನದ ಜಿಜ್ಞಾಸಾ ಸ್ಥಳ! ಮಂದಿರ-ಮಸೀದೆ-ಇಗರ್ಜಿ-ಕ್ಷೇತ್ರ-ಅರಣ್ಯ-ವಿದ್ಯಾಶಾಲೆ ಇತ್ಯಾದಿಗಳು. ಇಲ್ಲಿ "ಪೀನೇವಾಲಾ" ಅಂದರೆ ತತ್ವರಸದ ದಾಹಿ-ತೃಷಿತ=ಜಿಜ್ಞಾಸಿ ಇವನೇ ಕುಡುಕ.

ಈ ನಾಲ್ಕೂ ಸಂಕೇತಗಳಿಗೆ ಪ್ರತಿಸಾಲಿನಲ್ಲಿಯೂ ಬರುವ ನಾನಾ ಅರ್ಥಗಳನ್ನು ಪಾಠಕಗಣ ಗಮನಿಸಬೇಕು (ನೋಡಿ - ೧೨೭ ರಿಂದ ೧೩೫ ರವರೆಗಿನ ೯ ನುಡಿಗಳು) - ಇದು ನನ್ನ ಸವಿನಯ ಪ್ರಾರ್ಥನೆ.

ಒಳಗಡೆ : 'ಪೀನೇವಾಲಾ' ಮತ್ತು 'ಮತವಾಲಾ' ಈ ಎರಡೂ ಶಬ್ದಗಳನ್ನು ಹಿಂದಿನ ನಾಲ್ಕೂ ಸಂಕೇತಗಳಂತೆಯೇ "ಮೂಲ" ಶಬ್ದಗಳಂತೆಯೇ ಬಳಸಿಕೊಂಡಿದ್ದೇನೆ. ಇದು 'ಪ್ರಾಸ' ಹಾಗೂ 'ತೂಕ'ಕ್ಕಾಗಿ ಮಾತ್ರ.

ಪೀನೇವಾಲಾ=ಕುಡುಕ/ರು

ಮತವಾಲಾ='ಮತ'/ಅಭಿಪ್ರಾಯದವನು ಮತ್ತುಬಂದವನು, ಮತ್ತಾದವನು, ಸಿಲೆಯಾದವನು, ನಶೆ ಏರಿದವನು, ಅಂದರೆ-ತತ್ವರಸವನ್ನು ಕುಡಿದು ಮತ್ತಾದ 'ಧ್ಯಾನನಿಮಗ್ನ'! ರಸಿಕ, ರಸಜ್ಞ, ಜ್ಞಾನಿ!

## - ತೆರೆಯಿರಿನ್ನು ಮಧುಶಾಲಾ -

೧. ಮೃದು ಭಾವಗಳೆಂಬ ದ್ರಾಕ್ಷಿಗಳಿಂದ
ಮಾಡಿ ತಂದಿಹೆನಿಂದು ಹಾಲಾ,
ಪ್ರಿಯತಮ, ನನ್ನವೇ ಈ ಕೈಗಳಿಂದ
ಕುಡಿಸುವೆನಿಂದು ಈ ಪ್ಯಾಲಾ;
ಮೊದಲು ನಿನ್ನನೇ ನಾ ಭೋಗಿಪೆನು,
ಮತ್ತೆ ಪ್ರಸಾದವ ಜಗ ಪಡೆಯುವುದು
ಎಲ್ಲರಿಗಿಂತ ಮೊದಲಿಗೆ ನಿನ್ನನೆ
ಕರೆವುದೆನ್ನ ಈ ಮಧುಶಾಲಾ!

೨. ದಾಹ ನಿನಗಿರೆ ಜಗವನೆ ಕುದಿಸಿ
ಪೂರ್ಣ ತೆಗೆವೆನೊ ನಾ ಹಾಲಾ,
ಒಂದು ಕಾಲಲಿ ಸಾಕಿಯಾಗಿ
ನರ್ತಿಸುವೆನೊ ಹಿಡಿದು ಈ ಪ್ಯಾಲಾ;
ಜೀವನದಾ ಈ ಮಧುರತೆಯೆಲ್ಲ-
ಎಂದೋ ನಿನ್ನನು ತುಳಿದಿಹುದು;
ಇಂದು ಸುರಿವೆನೊ ತಂದು ನಿನ್ನಡಿಯಲಿ
ಜಗದೊಳಿರುವ ಎಲ್ಲ ಮಧುಶಾಲಾ!

೩. ಪ್ರಿಯತಮ, ನೀನೇ ಇಂದು ಹಾಲಾ ಎನಗೆ,
ನಾ ನಿನ್ನ ತೃಷಿತ ಪ್ಯಾಲಾ;
ನಿನ್ನನೇ ನೀ ನನ್ನಲಿ ತಂಬಿ
ನೀನಾಗುವೆ ಜನರಿಗೆ ಪೀನೇವಾಲಾ;
ಛಕ ಛಕ ಚಲಕಿಸುತಿಹೆ ನಾ ನಿನ್ನ
ಮತ್ತಾಗುವೆಯೋ ನೀ ಕುಡಿದೆನ್ನ;
ನಾ ನಿನಗಾದರೆ ನೀ ನನಗಾಗುವೆ,
ನಾವಿಂದು ಪರಸ್ಪರ ಮಧುಶಾಲಾ!

೪. ಭಾವುಕತೆಯೆಂಬಾ ದ್ರಾಕ್ಷಾಲತೆಯಿಂ
ಹಿಂಡಿ ತೆಗೆದು ಕಲ್ಪನೆಯ ಹಾಲಾ,
ಸಾಕಿಯಾಗಿ ಕವಿ ತಾ ಬಂದಿಹನೊ
ತುಂಬಿ ಕವಿತೆಯ ಈ ಪ್ಯಾಲಾ;
ಕಣದಷ್ಟೂ ಕಡಿಮೆಯಾಗದಿದೆಂದೂ
ಲಕ್ಷ-ಲಕ್ಷ ಜನರೇ ಹೀರಿದರೂ;
ಪಾಠಕ ಗಣವೇ ಕುಡುಕರು ಇಲ್ಲಿ!
ನನ್ನ ಪುಸ್ತಕವೇ ಮಧುಶಾಲಾ!!

೫. ನಿತ್ಯ ಮಾಡುತಲಿರುವೆನು ನಾನು
ಮಧುರ ಭಾವನೆಗಳ ಸುಮಧುರ ಹಾಲಾ,
ತುಂಬಿಸುವೆನು ನಾನೀ ಮಧುವಿಂದೆನ್ನ-
ಅಂತರಂಗದ ತೃಷಿತ ಪ್ಯಾಲಾ;
ಕಲ್ಪನೆಯ ಕೈಗಳಿಂದೆತ್ತಿಕೊಳ್ಳುತ
ನಾನೇ ನಾನು ಅದ ಕುಡಿಯುವೆನು;
ನನ್ನೊಳಗೇ ನಾನಿರುವೆನು ಸಾಕಿ
ಕುಡಿದವನೇ ಮಧುಶಾಲಾ!

೬. ಮದಿರಾಲಯ ತಲುಪಲು ಮನೆಯಿಂದ
ಹೊರಡುವನೋ ಪೀನೇವಾಲಾ,
'ದಾರಿಯಾವುದು?' ಅಸಮಂಜಸ ಪ್ರಶ್ನೆ
ಕೇಳಿದರವನೇ ಭೋಲಾ-ಭಾಲಾ;
ಬೇರೆ ಬೇರೆ ದಾರಿಯ ತೋರಿಪರೆಲ್ಲರು
ಆದರೆ, ನಾನೂ ಹೇಳುವೆ ಕೇಳು:
'ದಾರಿ ಹಿಡಿದು ದಾರಿಯಲಿ ದಾರಿಯುದ್ದಕೂ
ನಡೆ ನೀ', ದೊರೆವುದು ತಾನೇ ಮಧುಶಾಲಾ!

೭. ಅಯ್ಯೋ, ನಡೆ-ನಡೆಯುತಲೇ ಅದೆಷ್ಟು
ಕಳೆದೆನೋ ಜೀವನದಲಿ ಕಾಲ!
ದಾರಿಯತೋರುವ ಪ್ರತಿಯೊಬ್ಬನು ಹೇಳುವ:
'ಇನ್ನೂ ದೂರ'ವೆನ್ನುವ ಜಾಲ!
ಧೈರ್ಯವಿದ್ದರೂ ಮುನ್ನಡೆಯುವುದೆಂತು?
ಸಾಹಸವಿರೆ, ಹಿಂತಿರುಗುವುದೆಂತು?
ಕಿಂಕರ್ತವ್ಯ ವಿಮೂಢನ ಮಾಡಿ
ತಾ ದೂರ ನಿಂತಿದೆ ಮಧುಶಾಲಾ!

೮. ನಡೆಯುತ ಅವಿರತ ನುಡಿಯುತಲಿರು ನೀ
ಮಧು-ಮದಿರಾ, ಮಾದಕ-ಹಾಲಾ,
ಕೈಯಲ್ಲೇ ಅನುಭವಿಸುತ ನಡೆ ನೀ
ಈ ಲಲಿತ ಕಲ್ಪಿತ ಮಧುಪ್ಯಾಲಾ;
ಧ್ಯಾನಿಸುತಿರು ನೀ ಮನದಲಿ ನಿನ್ನ
ಸುಮಧುರ ಸುಖಕರ ಸುಂದರ ಸಾಕಿಯನು;
ಇನ್ನು-ನೀ ನಡೆ, ಮುಂದೆ ಪಥಿಕನೆ
ದೂರಾಗದು ನಿನಗೆ ಮಧುಶಾಲಾ!

೯. ಮದಿರಾಪಾನದಭಿಲಾಷೆಯೆ ಒಮ್ಮೆ
ಆಗುವುದೋ ತಾ ಹಾಲಾ,
ಅಧರಾಧರಗಳಾತುರತೆಯಲೇ
ಆಭಾಸಿತವಾದಾಗ ಈ ಪ್ಯಾಲಾ;
ಸಾಕಾರವ ಹೊಂದುವಳೋ ಸಖಿ, ಸಾಕೀ-
ಈ ಧ್ಯಾನದಿ ತಾ ಮೈಮರೆಯುತಲೆ,
ಹಾಲಾ-ಪ್ಯಾಲಾ, ಇವೆರಡೂ ಸಾಕಿ,
ದೊರೆವುದಾಗಲೇ ಮಧುಶಾಲಾ!

೧೦. ಕೇಳು: ಕಲ-ಕಲ, ಛಲ-ಛಲವೆನ್ನುತ ಮಧು
ಘಟದಿಂದಿಳಿವುದು, ಪ್ಯಾಲೆಯಲಿ ಹಾಲಾ,
ನೋಡು: ರಿನ್‌ಜಿನ್ ರಿನ್‌ಜಿನ್ ಎನ್ನುತ ಇಳಿಯುವ
ಮಧು ಹೋಲುವುದಾ ಸಾಕೀಬಾಲಾ;
ಬಾ, ಈಗ ಬಂದಿನೀ, ದೂರವಿನ್ನೇನೂ ಇಲ್ಲ,
ಉಳಿದಿರುವವು ನಾಲ್ಕೇ ಹೆಜ್ಜೆಗಳು
ಅದೋ! ಕುಡಿದವರೆಲ್ಲರೂ ಬಾಯ್ ಚಪ್ಪರಿಸುತಲಿಹರು,
ಇಗೋ! ಸುಗಂಧಸೂಸುತಿದೆ, ಆಹಾ! ಮಧುಶಾಲಾ!!

೧೧. ಜಲ ತರಂಗವೇ ನುಡಿವುದು, ಆ ಪ್ಯಾಲೆಗೆ-
ಚುಂಬನ ಗೈಯಲು ಈ ಪ್ಯಾಲಾ,
ವೀಣೆಯೇ ಝುಂಕೃತವಾಗುವುದು, ನಡೆಯೆ
ನವಿಲಿನೊಲೀ ಸಾಕೀಬಾಲಾ;
ಬಯ್ಯುವ ಬಡಿಯುವ ಮಧು-ವಿಕ್ರೇತನ
ಮದ್ದಳೆ ತಾನನುಕರಿಸುವುದು;
ಮಧು ರವದಿಂ ಮಧು ಮಾದಕತೆಯ
ತುಂಬಿಸುವುದು ಈ ಮಧುಶಾಲಾ!

೧೨. ಮೆಹಂದೀ ರಂಜಿತ ಮೃದುಲ ಹಸ್ತದಿ
ಮುತ್ತಿನ ಹಾಗಿದೆ ಮಧು ಪ್ಯಾಲಾ,
ಸೆರಗಲಿ ಮುಖ ಮುಚ್ಚಿದ, ದ್ರಾಕ್ಷಿಯ-
ಹೋಲುವ, ಸ್ವರ್ಣವರ್ಣ ಸಾಕೀ ಬಾಲಾ;
ಕಾಲಲಿ ಗೆಜ್ಜೆ, ಕೈ-ಜಾಮಾ ನೀಲಾ,
ಬಯ್ಯಲಿ ಬಡಿಯಲಿ ಪೀನೇ ವಾಲಾ,
ಇಂದ್ರಧನುಷವ ಸ್ಪರ್ಧೆಗೆ ಕರೆಯುತ
ಇಂದು ನಿಂತಿದೆ ಈ ಮಧುಶಾಲಾ!!

೧೩. ಕೈಯಲಿ ಬಂದು ಕೂಡುವ ಮುನ್ನ
ಒನಪು ಮಾಡುವುದು ಈ ಪ್ಯಾಲಾ,
ತುಟಿಗಳ ಮೇಲೆ ತಾಗುವ ಮುನ್ನ
ಒಯ್ಯಾರವಗೈವುದು ಈ ಹಾಲಾ;
ಸ್ವಲ್ಪಾದರೂ ನಿನ್ನ ದೂರೀಕರಿಪುದು,
ಬರುವ ಮುನ್ನವೀ ಸಾಕೀ ಬಾಲಾ;
ಹೆದರದಿರೊ ಪಥಿಕನೆ, ನಿನ್ನ-
ಸನ್ಮಾನವಗೈವುದು ಮಧುಶಾಲಾ!

೧೪. ಕಂಥಾರಯಪ್ಪೋಲ್ ಸುರಿವಾ ಈ ಸುರೆ, ಕುಡಿಯೋ
ಇದು ಎಂದೆಂದಿಗು ಅಲ್ಲವೊ ಜ್ವಾಲಾ,
ನೊರೆ ತುಂಬಿದ ಮದಿರೆ ಇದು, ಇದು-
ಅಲ್ಲವೊ ಎದೆ ಚರ್ಮದ ಹಾಲಾ;
ಈ ಮದಿರೆಯ ಕುಡಿಯೆ, ನೋವೇ ನಶೆಯು,
ವಿಗತ ಸ್ಮೃತಿಗಳೇ ಸಾಕಿಯರು;
ಈ ನೋವಲಿ ನಲಿವನು ಕಾಂಬರಿಗೆಂದೇ
ಕರೆವುದೆನ್ನ ಈ ಮಧುಶಾಲಾ!

೧೫. ಪಥಿಕ, ಜಗದ ಶೀತಲ ಹಾಲಾದಂತೆ
ಅಲ್ಲವೋ ಇದು, ಇದು ಬೇರೇ ಹಾಲಾ,
ಪಥಿಕ, ಜಗದ ತಂಪಿನ ಪ್ಯಾಲೆಗಳಂತೆ
ಅಲ್ಲವೊ ಇದು, ಇದು ಬೇರೇ ಪ್ಯಾಲಾ;
ಜ್ವಾಲ-ಸುರಾ ಜ್ವಲಿಸುತಿದೆ-ಪ್ಯಾಲೆಯಲಿ-
ಇದು, ಜ್ವಲಿತ ಹೃದಯದ ಕಾವ್ಯ ಸುರಾಜ್ವಾಲೆ;
ಜ್ವಲಿಸಿದರೂ ತನ್ನ, ಭೀತಿಯದಾರಿಗೆ ಇಲ್ಲವೊ-
ಅವರಿಗೆ, ತರವಿಹುದೆನ್ನ ಈ ಮಧುಶಾಲಾ!

೧೬. ಹರಿವ ಹಾಲಾ ನೋಡಿದಿರಿ, ನೋಡಿರಿನ್ನು-
ಕುದಿ ಕುದಿ ಕುದಿವಾ ಒಳಹಾಲಾ,
ನೋಡುತಿರಿ ನೀವ್, ಪ್ಯಾಲೆಯ ಹಿಡಿಯುತಲಿ
ತುಟಿಯನೆ ಸುಡುವುದು ಈ ಪ್ಯಾಲಾ;
"ತುಟಿಯಷ್ಟೇ ಏನು? ದೇಹವೇ ಸುಡಲಿ!
ಕುಡಿಯಲು ಎರಡೇ ಹನಿಸಿಗಲಿ!!"
ಇಂತೆನ್ನುವ ವಧುವಿನ ಹುಚ್ಚರಿಗೆ
ಇಂದು ಕರೆಯುತಿದೆ ನನ್ನೀ ಮಧುಶಾಲಾ!

೧೭. ಧರ್ಮಗ್ರಂಥಗಳನೆಲ್ಲವ ಸುಟ್ಟು
ಹಾಕಿಹುದಾರ ಅಂತರ್ ಜ್ವಾಲಾ,
ಮಂದಿರ ಮಸೀದೆ ಚರ್ಚುಗಳೆಲ್ಲವ
ಕುಟ್ಟಿ ಕೆಡವಿಹನಾವನೋ - ಮತವಾಲಾ;
ಪಂಡಿತ-ಮುಲ್ಲಾ-ಫಾದರಿಗಳ
ಬಂಧಗಳನಾವನು ಕಿತ್ತೊಗೆದಿಹನೋ,
ಅಂಥವನನ್ನೇ ಮಾಡುವುದಿಂದು
ಸ್ವಾಗತವೆನ್ನೀ ಮಧುಶಾಲಾ!

೧೮. ಕೆಂಪು ಚಿಮ್ಮುವ ತುಟಿಗಳಿಂದಾವನು
ಅಯ್ಯೋ, ಚುಂಬಿಸಲಿಲ್ಲವೊ ಈ ಹಾಲಾ,
ಹರ್ಷ ವಿಕಂಪಿತನಾಗುತಲಾವನು
ಅಯ್ಯೋ, ಸ್ಪರ್ಶಿಸಲಿಲ್ಲವೊ ಈ ಪ್ಯಾಲಾ,
ನಾಚುತ ಸೆರಗಲಿ ನಿಂತಿಹ ಸಾಕಿಯ
ಬರಸೆಳೆದಪ್ಪಲದಾವನು ನಾಚಿದನೋ,
ವ್ಯರ್ಥ ಒಣಗಿಸಿ ಕೊಂಡನವನು
ಮಧುಮಯ ಜೀವನ ಮಧುಶಾಲಾ!

೧೯. ಪ್ರೇಮಿ-ಸಾಕೀ ಪೂಜಾರಿಯಾಗಲಿ
ಗಂಗಾಜಲ ಪಾವನ ಹಾಲಾ,
ತಿರುಗುತಲಿರಲಿ ನಿರಂತರ ಗತಿಯಲಿ
ಮಧುಪ್ಯಾಲಿಗಳಾ ಸರಮಾಲಾ;
"ಹಿಡಿ ಇನ್ನೂ ನೀ, ಕುಡಿ ಇನ್ನೂ ನೀ"
ಇದೇ ಮಂತ್ರವ ಜಪಿಸುತಲಿ,
ಶಿವ ಪ್ರತಿಮೆಯೊಲಾಗಿ ನಾ ಕುಳಿತಿರಲು
ಮಂದಿರವಾಗಲಿ ಮಧುಶಾಲಾ!

೨೦. ಗುಡಿಯಲಿ ಗಂಟೆ ಬಾರಿಸಲಿಲ್ಲ
ಏರಲಿಲ್ಲ ಪ್ರತಿಮೆಗೆ ಹೂ ಮಾಲಾ,
ಭವನದಿ ಬತ್ತಲೆ ಕುಳಿತಿಹನಾಜಿನ
ಕೊಟ್ಟು ಮಸೀದೆಯಲಿ ತಾಲಾ;
ಗಿರಿ ಸಾಗರಗಳ ಗೋಡೆಗಳೆಲ್ಲಾ-
ಕೊಳ್ಳೆಯಾಗಲಿ ನರಪತಿ ಭಂಡಾರಗಳೆಲ್ಲಾ;
ಶರಣೆನ್ನಿರಿ ಶುಭವೆನ್ನಿರಿ ಕುಡಿವರಿಗೆ
ತೆರೆದಿರುವುದು ಸದಾ ಈ ಮಧುಶಾಲಾ!

೨೧. ಅಳುವವರೊಬ್ಬರೂ ಇಲ್ಲದಲೇನೇ
ಅಳಿದವು ಮಹಾಮಹಾ ಪರಿವಾರಗಳೆಲ್ಲಾ,
ಮಸಣ ಮೌನವಾವರಿಸಲಿ ಮಹಲಲಿ
ಅಲ್ಲಿ ಕುಣಿವಳೆನ್ನ ಸುರ-ಬಾಲಾ;
ರಾಜ್ಯಗಳಳಿಯಲಿ ರಾಜರುಗಳ
ಭಾಗ್ಯಸುಲಕ್ಷ್ಮಿಯೇ ಚಿರನಿದ್ರಿಸಲಿ;
ಕೂಡಿರುವರು ಇಂತೇ ಕುಡಿವವರೆಲ್ಲಾ,
ಕೂಡಿಸುತಿರುವುದು ಮಧುಶಾಲಾ!

೨೨. ಅಳಿದರೆಲ್ಲರೂ ಅಳಿಯರಿವರೆಂದೂ:
ಸುಂದರ ಸಾಕೀ, ಕರಿ-ಹಾಲಾ,
ರಸವೆಲ್ಲವು ಬತ್ತಲು, ಹರಿಯುತಲಿರುವವು
ಹಾಲಾಹಲ ಮತ್ತೂ ಹಾಲಾ;
ವೈಭವ ತುಂಬಿದ, ಗಿಲಿಬಿಲಿ ಎನ್ನುವ
ಸ್ಥಾನಗಳೆಲ್ಲ ಸ್ಮಶಾನಗಳಾಗಲಿ,
ಎಚ್ಚರಿಸುತಲಿರುವರು ನಿರಂತರ ಕುಡುಕರು,
ಎಚ್ಚರಿಸುವುದೀ ಮಧುಶಾಲಾ!

೨೩. ಒಳ್ಳೆಯದೆನ್ನಿಸಿಕೊಂಡಿಲ್ಲವೀ ಜಗದಿ
ಮದ-ಚಂಚಲ, ಡೊಂಕಿನ ಮಧುಪ್ಯಾಲಾ,
ಡೌಲಿನ ಮನುಜರು, ರಸ-ಪುತ್ಥಳಿ ಸಾಕಿ,
ಮನಸಿಕರಾಯರು, ಪೀನೇವಾಲಾ;
ಒಳ ಹೊಕ್ಕವರೆಂದೂ ಹೊರಬರಲೊಲ್ಲರು,
ಹೊರಗಡೆ ಹೊಂದಿಕೆ ಸರಿ ಇಲ್ಲ;
ಪ್ರತಿದಿನ ಪ್ರತಿಕ್ಷಣ ಜಗ, ಜರ್ಜರಗೊಳುತಿದೆ
ನಿತ್ಯವಿನೂತನವೆನ್ನೀ ಮಧುಶಾಲಾ!

೨೪. ಸವಿಯದಲೇ ಈ ಸವಿಯನು ಮತ್ತನು
ಹೀನವೆಂದರೇನೀ ಮಧುಶಾಲಾ?
ಕುಡಿದು ನೋಡಿದೆಯೆಂದರೆ ತಾನೇ
ಬಾಯಿಗೆ ಬೀಳ್ವುದು ತಾಲಾ;
ದಾಸ-ದ್ರೋಹಿಗಳೀರ್ವರ ಮೇಲೂ
ಗೆಲುವಿದೆ ಸುರೆಯ-ಪ್ಯಾಲೆಗಳ;
ವಿಶ್ವವಿಜಯಿನಿಯಾಗಿ ಜಗದಲಿ
ಬಂದಳೆನ್ನೀ ಮಧುಶಾಲಾ!

೨೫. ಹಚ್ಚ ಹಸಿರಾಗೇ ಇರುವುದು ಮದಿರಾಲಯ
ಜಗದ ಮೇಲೆ ಬಿದ್ದರೂ ಬರಗಾಲಾ,
ಅಲ್ಲಿ ಮುಹರ್ರಮದಾ ತಮ ಕವಿಯಲು
ಇಲ್ಲಿ ಉರಿವುದು ಹೋಲಿಯ-ಜ್ವಾಲಾ;
ಸಗ್ಗದಿಂದಿಳಿದಳು ನೇರ ವಸುಧೆಗೆ
ದುಃಖವನೆಂತರಿವಳೀ ಸುರಬಾಲಾ?
ಉಪವಾಸ ಉರಿದರೂ ಈ ಜಗವೆಲ್ಲ
ಹಬ್ಬವನಾಚರಿಪಳು ಈ ಮಧುಶಾಲಾ!

೨೬. ಒಂದು ವರುಷದಲಿ ಒಂದೇ ಬಾರಿ
ಜಗದಲಿ ಹೋಳಿಯ ಜ್ವಾಲಾ,
ಒಂದೇ ಬಾರಿಯೆ ಹತ್ತುವುದು ಪಾಳಿ
ಆಗ ಇರುವವು ದೀಪದ ಮಾಲಾ;
ಜಗಜನರೇ, ನೀವೆಂದಾದರೂ ಬನ್ನಿ
ಬಂದು ನೋಡಿರೀ ಮದಿರಾಲಯವ;
ಹಗಲಲಿ ಹೋಳಿ, ರಾತ್ರಿ ದಿವಾಳಿ
ನಿತ್ಯವು ನಡೆವುದು ಮಧುಶಾಲಾ!

೨೭. ಆವನರಿಯನೀ ಸತ್ಯವ: ಮನುಜನು-
ತಾನಾಗಿ ಬಂದನು ಪೀನೇವಾಲಾ,
ಯಾರು ಅಪರಿಚಿತರಾ ಸಾಕಿಗೆ
ಬೆಳೆಸಿದಳಾವಳೋ ಕುಡಿಸಿ-ಎದೆ ಹಾಲಾ;
ಜೀವನ ಪಡೆದು, ಮಾನವ ಕುಡಿದು,
ಮತ್ತಾಗಿಹನೊ ಈ ಕಾರಣದೆ;
ಜಗದಲಿ ಬಂದೆಲ್ಲದಕೂ ಮೊದಲೇ
ಪಡೆದನು ತಾನವ ಮಧುಶಾಲಾ!

೨೮. ಇಂತೇ ಇರಲೀ ದ್ರಾಕ್ಷಾಬಳ್ಳಿ
ದೊರೆವುದಿದರಿಂದಲೇ ಹಾಲಾ,
ಇಂತೇ ಇರಲೀ ಜಗದಲಿ ಮಣ್ಣು
ಆಗುವುದಿದರಿಂದಲೇ ಮಧುಪ್ಯಾಲಾ;
ಇಂತೇ ಇರಲೀ ಮಧುದಾಹಿ
ಸಂತೃಪ್ತಿಯನರಿಯದ ಈ ದೇಹಿ;
ಇಂತೇ ಇರಲಿದ ಕುಡಿವವರೆಲ್ಲ
ಇರಲಿಂತೇ, ಚಿರ-ಈ-ಮಧುಶಾಲಾ!

೨೯. ಸುಕುಶಲವೆಂದೇ ತಿಳಿಯಿರಿ ನನ್ನ
ಸುಕುಶಲವಿರೆ ಸಾಕೀ ಬಾಲಾ,
ಮಂಗಲಾಮಂಗಲಂಗಳ ತಿಳಿವೆನದೆಂತು
ಮತ್ತಿನೊಳಿರೆ, ನಾ, ಕುಡಿದು ಈ ಹಾಲಾ;
ಕೇಳದಿರಿ, ನನ್ನ ಕ್ಷೇಮವ ಗೆಳೆಯರೆ
ಮಧುಶಾಲೆಗೆ ನೀವೈತಂದರೆ,
ಕಂಡು ನನ್ನನು 'ಜಯ್ ರಾಮ್' ಎನ್ನದೆ
ಅನ್ನಿರೆಲ್ಲರೂ 'ಜಯ್ ಮಧುಶಾಲಾ'!

೩೦. ಸೂರ್ಯನಾಗಲಿ ಮಧು-ವಿಕ್ರೇತ,

ಕಡಲಾಗಲಿ ಕೊಡ, ಜಲ ಹಾಲಾ,
ಸಾಕಿಯಾಗಿ ಬರಲಿ ಮೋಡಗಳು
ಭೂಮಿಯಾಗಲಿ ತಾ ಮಧುಪ್ಯಾಲಾ,
ರಿಮ್‌ಜಿಮ್ ರಿಮ್‌ಜಿಮ್ ರಿಮ್‌ಜಿಮ್ಮೆನ್ನುತ
ಜುಳುಜುಳು ಸುರಿಯಲಿ ನಭದಿಂ ಸುರೆಯು;
ಗಿಡಮರಬಳ್ಳಿ ಹೂ ಹುಲ್ಲಾಗಿ ಕುಡಿವೆನು ನಾನು
ಮಳೆಗಾಲವಾಗಲಿ ಮಧುಶಾಲಾ!

೨೧. ತಾರಕಮಣಿಯಿಂ ಶೋಭಿತನಭ-
ವಾಗಲಿಂದು ಈ ಮಧುಪ್ಯಾಲಾ,
ತಿರುವಿಟ್ಟದರಲಿ ತುಂಬಿದರಾಯ್ತು
ಸಾಗರ ಜಲದಾ ಹಾಲಾ;
ಸಾಕಿಯಾಗಿ ಬಂದು ಮತ್ತಸಮೀರಣ
ತುಟಿಗಳ ಮೇಲೆ ಚಿಮುಕಿಸಲಿ,
ಸಾಗರ ತಟದಿಂ ಹಬ್ಬಿದ ಈ
ವಿಶ್ವವಾಗಲಿ ಮಧುಶಾಲಾ!

೨೨. ತುಟಿಗಳ ಮೇಲಿರಲಾವುದೇ ರಸ,
ನಾಲಗೆಗನಿಸುವುದದು: ಹಾಲಾ,
ಕೈಯ ಮೇಗಡದೇನೇ ಇಟ್ಟರೂ
ಅನಿಸುವುದದು ಮಧುಪ್ಯಾಲಾ;
ಯಾವುದೇ ಮುಖವೆನ್ನೆದುರಲಿ ಬಂದರೂ
ಸಾಕಿಯ ಮುಖದೊಲು ಕಾಣುವುದು,
ಕಣ್ಣಿನ ಎದುರಲದೇನೇ ಇರಲಿ,
ಕಣ್ಣೊಳಗಿದೆ ಈ ಮಧುಶಾಲಾ!

೨೩. ಗಿಡಮರಬಳ್ಳಿಗಳೇ ಸಾಕಿಯರು
ಹಿಡಿದು ಕೈಯಲಿ ಹೂಗೊಂಚಲು ಪ್ಯಾಲಾ,
ತುಂಬಿಹುದಾ ಹೂ-ಪ್ಯಾಲೆಗಳೊಳಗೆ
ಪರಿಮಳ ಮಧು ಸುರಭಿತ ಹಾಲಾ;
ಹಾಡಿ ಬೇಡಿ ಕಾಡಿ, ಭ್ರಮರಗಳಾ ದಳ
ರಸಪೂರ್ಣ ಮದಿರೆಯ ಕುಡಿಯುವವು;
ತೂಗುತ-ತೂನೆಯುತ, ಮಧು-ಮದ ಕಂಪಿತ
ಉಪವನವೇನಿದು? ಮಧುಶಾಲಾ!

೨೪. ಪ್ರತಿರಸಾಲ ತರುಗಳು ಸಾಕಿಯಪೋಲಿವೆ,
ಪ್ರತಿ ಮಂಜರಿಕೆಗಳೆ ಮಧುಪ್ಯಾಲಾ,

ಸೂಸುತಲಿದೆ ಮಂಜರಿಕೆಯ ಸುತ್ತಲು-
ಮಧು-ಮಾದಕ ಸೌರಭ ಸುಮ ಹಾಲಾ,
ಕುಕ್ಕುತ ನೆಕ್ಕುತ ಸೊಕ್ಕಿದ ಮತ್ತಿನ-
ಕೋಗಿಲೆ, ಹಾಡುತಿವೆ ಪ್ರತಿ ಟೊಂಗೆಯಲಿ,
ಮಧುಮಾಸದಿ, ಪ್ರತಿ ಮಾವಿನ ಮರದಲಿ
ಜಾಗ್ರತಗೊಳುತಿದೆ ನವ-ಮಧುಶಾಲಾ!

೩೫. ಎಳಗಾಳಿಯ ಮಂದ ಪ್ಯಾಲೆಯಲಿ
ಮಧುಮಾಸದ ಸೌರಭ ಸುಮ ಹಾಲಾ,
ತುಂ ತುಂಬುತ ತೀಡುತ ತಿಳಿಗಾಳಿಯು ತಾ
ತೀಡುತಿದೆ ಸುಮಧುರ ಸುಮಹಾಲಾ,
ಕೆಚ್ಚನೆಕೆಂಪು - ಹಚ್ಚನೆ ಹಸಿರಲಿ ಶೋಭಿತ
ನವನೂತನ ಪಲ್ಲವ ತರುಬಳ್ಳಿಗಳು,-
ಛಕ್‌ಛಕ್ ಝುಕ್‌ಝುಕ್ ಎನ್ನುತ ತೂಗುತ-
ಮಧುವನದಲಿ ತುಂಬಿದೆ ಮಧುಶಾಲಾ!

೩೬. ಸಾಕಿಯಾಗಿ ತಾ ಬರುವಳು ಬೆಳಗು,
ಬರುತಿರೆ ನವಾರುಣ ಉಷೆ-ಬಾಲಾ,
ತಾರಕ-ಮಣಿ-ಮಂಡಿತ ವಸನವ ಕೊಂಡು
ಬೆಲೆಯನು ತೋರಿದಳೆನ್ನೀ ಹಾಲಾ;
ಅಗಣಿತ ಕರ ಕಿರಣಗಳಿಂ ಕುಣಿಯುತ,
ಕುಡಿಯುತ, ಹಾರುತ, ಹುಚ್ಚಾಯಿತೊ ಖಗಕುಲವು;
ಪ್ರತೀ ಪ್ರಭಾತದೊಳು, ಪೂರ್ಣ ಪ್ರಕೃತಿಯೊಳು,
ಅರಳುತಲಿರುವುದು ಈ ಮಧುಶಾಲಾ!

೩೭. ಇಳಿಯುತಲೇ ತಾನೇರಿದ ನಶೆಯು
ಬಳುಕುತ ಬರುವಳು ಸಂಧ್ಯಾ-ಬಾಲಾ,
ಅತಿಪುರಾತನ ಅತಿ ಮತ್ತಿನ
ನಿತ್ಯನಶಿಸುವುದದು ಹಾಲಾ,
ಜೀವನದಾ ಶೋಕ-ಸಂತಾಪಗಳೆಲ್ಲ
ಇದ ಕುಡಿಯುತಲೇ ನಶಿಸುವವು;
ಸುರಾ-ಸುಪ್ತನಾಗುವ ಮದ-ಲೋಭಿ,
ಜಾಗ್ರತವಿರುವುದು ಮಧುಶಾಲಾ!

೩೮. ಅಂಧಕಾರವೇ ಮಧುವಿಕ್ರೇತ,
ಸುಂದರ ಸಾಕಿ : ಶಶಿ-ಬಾಲಾ,

ಕಿರಣ ಕಿರಣದಿಂ ತುಳುಕಿಸುತ
ಶಶಿ-ತರುವಳು: ನಿಶೆ-ಪ್ಯಾಲಾ;
ಕುಡಿಯುತಲಿದನು ಚೇತನ ನಶಿಸಿ
ತೂಕಡಿಸಲು ಶುರು ಮಾಡುವರು;
ತಾರಕದಲದಿಂ ಹೀರುವ ಜನರೆ
ರಾತ್ರಿಯಲ್ಲವಿದು ಮಧುಶಾಲಾ!

೩೯. ಎಲ್ಲಿ ನೋಡಿದರಲ್ಲಿ ಎನಗೆ
ಕಾಣುವುದೊಂದೇ: ಹಾಲಾ,
ಎಲ್ಲಿ ನೋಡಿದರಲ್ಲಿ ಎನಗೆ
ಕಾಣುವುದೊಂದೇ: ಪ್ಯಾಲಾ,
ಎಲ್ಲಿ ನೋಡಿದರಲ್ಲಿ ಎನಗೆ
ಕಾಣುವಳೀ ಸಾಕೀ-ಬಾಲಾ;
ಎಲ್ಲಿ ನೋಡಿದರಲ್ಲಿ ಎನಗೆ
ಕಾಣುವುದಿದುವೇ: ಮಧುಶಾಲಾ!

೪೦. ಸಾಕಿಯಾಗಿ ಮುರಳಿಯು ಬಂದು
ಜತೆಯಲಿ ತಂದಿತು ಮಧುಪ್ಯಾಲಾ,
ಅದರಲಿ ತುಂಬಿ ತುಳುಕಿಸುತಿತ್ತು
ಅಧರ-ಸುಧಾ-ರಸ-ದಾ ಹಾಲಾ,
ಯೋಗಿರಾಜನಿದರ ಗೆಳೆತನ ಗೈದ,
ನಟವರನಾಗರ ತಾನಾದ;
ಎಂತೆಂಥವರನು, ನೋಡಿದು ಹೇಗೆ-
ಕುಣಿ, ಕುಣಿಸುತಿದೆ ಈ ಮಧು ಶಾಲಾ!

೪೧. ವಾದಕನಾಗಿ ತಾ ಮಧುವಿಕ್ರೇತ,
ತಂದಿಹನೈ ಸುರ-ಸುಮಧುರ-ಸ್ವರ ಹಾಲಾ,
ರಾಗಿಣಿಯಾಗಿ ಸಾಕಿಯು ಬಂದು,
ತುಂಬಿಹಳೈ ತಾ, ತಂತಿಯ-ಪ್ಯಾಲಾ;
ವಿಕ್ರೇತನ ವಾದ್ಯದ ಸಂಕೇತದ ಮೇಲೆ
ಓಡತಲಿಹಳೈ-ಲಯ ಆಲಾಪದಲಿ,
ಕುಡಿಸುತಲಿಹಳೈ, ಕೇಳುಗರಿಗೆ ತಾ-
ಝುಂಕೃತ ವೀಣಾ-ಮಧುಶಾಲಾ!

೪೨. ಚಿತ್ರಕಾರನಾಗಿ ತಾ ಸಾಕಿಯು ಬಂದು
ಹಿಡಿವಳು : ಹೂ ಗೊಂಚಲ-ಕುಂಚದ ಮಧುಪ್ಯಾಲಾ,

ಅದರಲಿ ತುಂಬಿ ಕುಣಿವಳು ಕುಡಿಸಿ,
ಬಹುರಸ ರಂಗಿನ ಸುಮಧುರ ಸುಮಹಾಲಾ;
ಚಿತ್ತದೊಳಗಿನ ರೇಖಾ ಚಿತ್ರಗಳೆಲ್ಲ
ರಾಗರಂಜಿತವಾಗುವವಿದ ಕುಡಿದು;
ಚಿತ್ತಭಿತ್ತಿಯ ಚಿತ್ರಪಟದಲಿ
ನರ್ತಿಸುವಳು ನವಮಧುಶಾಲಾ!

೪೩. ಘನಶ್ಯಾಮಲ ದ್ರಾಕ್ಷಾಬಳ್ಳಿಗಳಿಂದ
ತಟ ತಟ ಸುರಿಯುತಿದೆ ಹಾಲಾ,
ನವಾರುಣ ಕಮಲಸುಕೋಮಲ ಮೊಗ್ಗಿನ
ಪ್ಯಾಲೆಯೆ, ಸುಮಸೌರಭದಾ ಮಧುಪ್ಯಾಲಾ;
ಚಂಚಲ ತೆರೆಗಳೆ ಸಾಕಿಯರಾಗುತ
ಮಾಣಿಕ ಮಧುವನು ಹರಿಸುವವು;
ಮತ್ತ ಹಂಸಗಳದ ಕುಡಿಯುತ ಕುಣಿಯಲು
ಮಾನಸರೋವರವೇ ಮಧುಶಾಲಾ!

೪೪. ಹಿಮಶ್ರೇಣಿಗಳೇ ದ್ರಾಕ್ಷಾಬಳ್ಳಿಗಳು
ಹಿಮಜಲವೇ ಸುಮಧುರ ಗಂಗಾಹಾಲಾ,
ಚಂಚಲನದಿಗಳೆ ಸಾಕಿಯರಾಗಿ
ತುಂಬಿಸಿ ತರುವವು ತೆರೆ, ತೆರೆಪ್ಯಾಲಾ;
ಮೃದುಕೋಮಲ ಸಮ ತಟಿಗಳ ಮೇಲೆಯೆ
ಚೆಲ್ಲುತ ಚೆಲ್ಲಾಡುವವು ನಿಶೆ-ದಿನವೂ
ಕುಡಿಯುತ, ಹೊಲಗಳು ನರ್ತಿಪವೆದ್ದು,
ವಿಶ್ವಭಾರತಿ ಪಾವನ ಮಧುಶಾಲಾ!

೪೫. ವೀರಪುತ್ರರ ಹೃದಯ ರಕ್ತದಲಿ
ಇಂದಾಗಿದೆ ರಕ್ತದ ಹಾಲಾ,
ವೀರಸುತರ ವರದೇಹಗಳ
ಹಿಡಿದಿರುವಳು ಮಾಡಿ ಮಧುಪ್ಯಾಲಾ,
ಅತಿ ಉದಾರದಾನಿಯಾಗಿ ಸಾಕಿ
ಭಾರತ ಮಾತೆಯಿಂದು ನಿಂದಿಹಳು;
ಸ್ವಾತಂತ್ರ್ಯವೆಂಬುದು ತಾ: ತೃಷಿತ ಕಾಳಿಯು!
ಬಲಿಪೀಠವಾಗಿದೆ ತಾ ಮಧುಶಾಲಾ!!

೪೬. ತಳ್ಳಿತೆನ್ನ ಈ ಮಸೀದೆಯು ತಾನು
ತಿಳಿದು ನಾನೊಬ್ಬ ಪೀನೇವಾಲಾ,
ತಳ್ಳಿದವೆನ್ನ ಗುಡಿ ಚರ್ಚುಗಳೆಲ್ಲ
ಕಂಡು ಕೈಯಲಿ ಮಧುಪ್ಯಾಲಾ;

ಈ ನಾಸ್ತಿಕನಿಗೆ ಸ್ಥಳವಾದರು ಎಲ್ಲಿ-
ದೊರೆಯುತಿತ್ತೀ ಜಗದಲ್ಲಿ?
ಶರಣಸ್ಥಲವಾಗಿ ಇರದಿದ್ದರೆ ಈ-
ಜಗದಲಿ, ಈ ಮಧುಶಾಲಾ!!

೪೭. ಪಥಿಕನಾಗಿ ನಾ ತಿರುಗುತಲಿಹೆನು,
ಎಲ್ಲೆಲ್ಲೂ ದೊರೆಯುತಿದೆ ಹಾಲಾ,
ಎಲ್ಲೆಲ್ಲೂ ದೊರೆವಳು ಪ್ರಿಯ-ಸಾಕಿ
ದೊರೆವುದೆಲ್ಲೆಲ್ಲೂ ಮಧುಪ್ಯಾಲಾ;
ತಂಗಲೆಲ್ಲೆಲ್ಲೂ ಈ ಜಗದಿ,
ಕಷ್ಟವಿನಿತಿಲ್ಲೆನಗೆ ಸಖ;
ಮಂದಿರ ಮಸೀದೆ ದೊರೆಯದಿದ್ದರೂ
ದೊರೆವುದೆನಗೆ ಈ ಮಧುಶಾಲಾ!

೪೮. ಮಸೀದೆ ನಮಾಜಿಗೂ ಸಿಂಗಾರವೇ ಇಲ್ಲ
ಹೇಳುತಿಹರೆಲ್ಲಾ ಅಲ್ಲಾತಾಲಾ,
ಸಿಂಗರಿಸಿಕೊಂಡು ತಾ ನಿಂತಿಹಳು ಸಾಕಿ
ಶೃಂಗಾರದೊಳಿಹನೀ ಪೀನೇವಾಲಾ;
ಎಂತು ಹೋಲಿಸಲಾಗುವುದೋ ಶೇಖ,
ಆ ಮಸೀದೆಯೊಂದಿಗೀ ಮದಿರಾಲಯವ?
ಚಿರವಿಧವೆಯು ತಾ ನಿನ್ನ ಮಸಿದೆಯು!
ನಿತ್ಯ ಸುಮಂಗಲಿಯೆನ್ನೀ ಮಧು ಶಾಲಾ!!

೪೯. ಕಪಳೆಯ ಕೇಳುತಲೇ ನಮಾಜಿಯು
ಮರೆತನೊ ಅಲ್ಲಾತಾಲಾ,
ಸಿಡಿಲೆರಗಿದರೂ ಅರಿವಿಲ್ಲವೊ ಇಲ್ಲಿ
ಸುರಾಮಗ್ನ ಪೀನೇ ವಾಲಾ;
ಶೇಖ, ಅನ್ಯಥಾ ಭಾವಿಸದಿರು ನೀ ಇದನು,
ಸ್ಪಷ್ಟ ಹೇಳುವೆ ಕೇಳು: "ನಿನ್ನ ಮಸೀದೆಗೆ-
ಯುಗಯುಗ ಕಳೆವರೂ ಕಲಿಸುತಲಿರುವುದು
ಧ್ಯಾನವಿಡುವುದನೆನ್ನೀ ಮಧುಶಾಲಾ!"

೫೦. ಹಿಂದೂ ಮುಸ್ಲಿಮರಿದ್ದರೆ ಇಬ್ಬರು
ಒಂದೇ ಇಹುದು ಈ ಈರ್ವರ ಪ್ಯಾಲಾ,
ಒಂದೇ ಇದೆ ಈರ್ವರಿಗೂ ಮದಿರಾಲಯ,
ಒಂದೇ ಈರ್ವರಿಗೂ ಹಾಲಾ,
ಈರ್ವರೂ ಒಂದಾಗುವತನಕಿಂತೇ ಇರುವರು-
ಮಸೀದೆ ಮಂದಿರದೊಳ ಪೋಗುತಬರುತ:

ವೈರವ ಬೆಳೆಸಿ, ಅಗಲಿಸುತಿರೆ ಅವುಗಳು,
ಪ್ರೇಮಿಸಿ, ಒಂದೆಡೆ ತರುವುದೆನ್ನೀ ಮಧುಶಾಲಾ!!

೫೧. ಯಾರೇ ಇರಲಿ ಅವ-ಶೇಖ, ನಮಾಜಿ
ಪಂಡಿತನಿರಲಿ ತಾ ಜಪಿಸುತ ಮಾಲಾ,
ವೈರಭಾವವ ತಾವೆಷ್ಟೇ ಇಟ್ಟರೂ
ವೈರವನೆಣಿಸದು ಈ ಹಾಲಾ;
ಒಂದೇ ಒಂದು ಬಾರಿಯೆ ಅವರು-
ಆಲಯದೆದುರಲಿ ಹೊರಟರೂ ಸಾಕು,
ಎಂತು ನಿಲ್ಲಿಸಳು ನೋಡುವೆ ನಾನೂ
ಮನದಂಚನು ಹಿಡಿದು ಮಧುಶಾಲಾ?!

೫೨. ಇತರೇ ರಸದಲಿ ರುಚಿ ಎಲ್ಲಿಯವರೆಗೆ?
ದೂರ ಇರುವವರೆಗೂ ಈ ಹಾಲಾ!
ಎಲ್ಲಿಯವರೆಗೆ ನೀವ್ ಹೆಮ್ಮೆಯ ಪಡುವಿರಿ?
ಕೈಯಲಿ ಬಂದರೆ ಮುಗಿಯಿತು-ಮಧುಪ್ಯಾಲಾ!
ಶೇಖ್, ಪೂಜಾರಿ, ಫಾದರಿಗಳೆ, ಮಾಡುತಿರಿ
ಮಸೀದೆ ಮಂದಿರ ಚರ್ಚುಗಳಲಿ-ಹೊರಪೂಜೆ;
ಮನಮೋರೆಯ ಒಳತೆರೆ ಏಳುವುದೊಮ್ಮೆ
ಬಂದಿಣುಕುವಿರಾಗ ನೀವೇ ನನ್ನೀ ಮಧುಶಾಲಾ!!

೫೩. ಇಂದೆನಿತೇ ಸಂಯಮ ಗೈದರೂ ಜಗವು
ನಾಳೆ ಕುಡಿಯಲೇ ಬೇಕೀ ಹಾಲಾ,
ಇಂದೆನಿತೇ ಧಿಕ್ಕಾರವ ಗೈದರೂ ಜಗವು
ನಾಳೆ ಸ್ವೀಕರಿಸಲೇ ಬೇಕೀ ಪ್ಯಾಲಾ;
ಎತ್ತಲಿನ್ನೂ ಹತ್ತವತಾರಗಳನಾ ಗೊಲ್ಲ,
ಎತ್ತಲಿನ್ನೂ ಮತ್ತವತಾರಗಳನು ಮುಲ್ಲಾ
ಇಂದಿರುವಲ್ಲಿ ಮಂದಿರ ಮಸೀದೆ ಚರ್ಚುಗಳು
ನಾಳಿರುವವು ಅಲ್ಲಿಯೇ ಮಧುಶಾಲಾ!

೫೪. ಯಜ್ಞದಗ್ನಿಯೊಲು ಉರಿಯುತಿದೆ
ಮಧುಭಟ್ಟಿಯ ಈ ಜ್ವಾಲಾ,
ಋಷಿಗಳಂತೆ, ಧ್ಯಾನ ನಿಮಗ್ನರಾಗಿ
ಕುಳಿತಿಹರೆಲ್ಲ ಮಧು ಪೀನೇವಾಲಾ;
ಮುನಿಕನ್ಯೆಯರಂತೆಯೆ ಮಧುಘಟೆ ಹಿಡಿದು
ಸುಳಿಯುತಿಪರೆಲ್ಲ ಸಾಕೀ ಬಾಲಾ,

ಯಾವ ತಪೋವನಕಿಂತೇನು ಕಡಿಮೆ ಇದೆ-
ನ್ನೀ ಪಾವನ ಮಧುಶಾಲಾ??

೫೫. ಪೂರ್ವಜರು ಕುಡಿದದ್ದಿದುವೆ 'ಸೋಮ-ಸುರಾ'
ನಾವಿಂದನ್ನುವೆವದನೇ 'ಮಧು-ಹಾಲಾ',
'ದ್ರೋಣ ಕಲಶ'ವೆಂದಾವುದಿತ್ತೋ ಅಂದು
ಆ 'ಉದಕ-ಮಂಡಲ'ವೇ ಈ 'ಮಧು-ಕಮಂಡಲಾ',
ವೇದ ಪುರಾಣದ ಟೀಕಾಕಾರರೆ, ಇನ್ನೂ-
ಯತಿ-ಸ್ವರಗಳ ಏರಿಳಿತದಲೇ ನೀವಿರ್ರಿ;
ಯುಗಯುಗದಲ್ಲೂ ಪೂಜ್ಯವೇ ಆಗಿದೆ
ಹೊಸತಲ್ಲವೀಗ ಈ ಮಧುಶಾಲಾ!

೫೬. ಇದೇ ಸಾಗರವೇ ಆ ಮೊದಲಿನ ವಾರುಣಿ,
ಕಡೆದಿಂದೂ ತೆಗೆವೆವು ಅದೇ ಹಾಲಾ,
ರಂಭೆಯ ಸಂತಾನವೇ ಇಂದೂ
ಆಗಿದೆ ಜನದೊಳು ಸಾಕೀ ಬಾಲಾ;
ದೇವಾದೇವರೆಲ್ಲರೂ ತಂಪರಾವುದನೋ
ಅದನೀ ಸಂತ ಮಹಂತರು ತಳ್ಳುವರೆ?
ಇವರಲ್ಲನಿತು ದೃಢತೆಯದುಂಟೆ?
ಅರಿಯಳೇ ಇವರನು ಈ ಮಧುಶಾಲಾ??

೫೭. ಎಂದೂ ಕೇಳಿಸಲಾರದೀ ಮಾತು: "ಹಾ!,
ಇವ, ಮುಟ್ಟಿದನೆನ್ನೀ ಹಾಲಾ!",
ಎಂದೂ ಯಾರು ನುಡಿಯರಿಂತು: "ಹೋ!,
ಅವ, ಎಂಜಲಿಸಿದನೆನ್ನೀ ಪ್ಯಾಲಾ!";
ಎಲ್ಲ ಜಾತಿಯ ಜನರೆಲ್ಲರು ಇಲ್ಲಿ
ಜತೆಯಲಿ ಕುಳಿತೇ ಕುಡಿಯುವರು;
ಸಾವಿರ ಸುಧಾರಕರಿಂದಾಗದ ಕಾರ್ಯವ
ಗೈವಳೊಬ್ಬಳೇ ಈ ಮಧುಶಾಲಾ!

೫೮. ಶ್ರಮ ಸಂಕಟ ಸಂತಾಪಗಳೆಲ್ಲವ
ಮರೆವಿರಿ ಕುಡಿಯುತ ಈ ಹಾಲಾ,
ಪಾಠವೇನಾದರೂ ನೀ ಕಲಿತಿದ್ದರೆ ಇಲ್ಲಿ
ಮರೆಯದಿರೋ ಮತ್ತಿನ ಮತವಾಲಾ;
ವ್ಯರ್ಥವಾಗುತಿಹರಲ್ಲಿ ಆ ಹರಿಜನರು,
ತಳ್ಳುತಿಹರವರನಾ ಹರಿಮಂದಿರದವರು;

ಮಧುಜನರೇ, ನೀವೇ ಶ್ರೇಷ್ಠರಿಲ್ಲಿ! ನಿಮ್ಮನು-
ಕಣ್ಣಂಚನು ಹಾಸುತ, ಕರೆವಳೀ ಮಧುಶಾಲಾ!

೫೯. ಒಂದು ರೀತಿಯಲದೆಲ್ಲರ ಸ್ವಾಗತ
ಮಾಡುವಳೀ ಸಾಕೀಬಾಲಾ,
ಅಜ್ಞ-ವಿಜ್ಞ-ರೊಳೇನಿದೆ ಅಂತರ
ಮತ್ತಾದ ನಂತರ ಮತವಾಲಾ?
ರಾಜಾ-ರಂಕರ ಮಧ್ಯದಿ ಭೇದವ
ಎಣಿಸಿಲ್ಲೆಂದೂ ಈ ಮದಿರಾಲಯವು;
ಸಾಮ್ಯವಾದದ ಪ್ರಥಮ ಪ್ರಚಾರಕಿ-
ಯಾಗಿಹಳೆನ್ನೀ ಮಧುಶಾಲಾ!

೬೦. ಬಾರಿ ಬಾರಿ ನಾಕೈಯೊಡ್ಡುತ ಮುಂದೆ
ಕೇಳಿಲ್ಲವಿಂದು ಈ ಹಾಲಾ,
ತಿಳಿಯದಿರು ನೀನಿದರಿಂದೆನ್ನನು:
"ಇವ ಸಾಧಾರಣ ಪೀನೇವಾಲಾ";
ದೂರೀಕರಿಸು ನೀನೀ ಸಂಕೋಚವ ಮೊದಲು
ಬಾ ಇದ್ದರೆ ಮಧು, ನೀ ಹನಿಸೆಲೆ ಸಾಕಿ
ನನ್ನದೇ ಸ್ವರದಿಂದಲೆ ಮತ್ತೆ
ತುಂಬಿ ತುಳುಕುವುದೀ ಮಧುಶಾಲಾ!

೬೧. ನಾಳೆ? ನಾಳೆಯ ಮೇಲಾವನು ನಂಬಿಕೆ
ಇಡುವನೊ ಪೀನೇವಾಲಾ?
ಆಗಬಹುದು ನಾಳೆಗೆಲ್ಲ ತಾ ಜಡ-
ಮತ್ತೆ, ಮತ್ತೆ, ಎತ್ತು ಇಂದೇ ಪ್ಯಾಲಾ;
ಕೈಯೊಳಿಂದು ಇರುವುದ ಭೋಗಿಸು
ನಾಳೆಯ ನಂಬುವುದೆಂತು?
ನಾಳೆ ಇದುವೂ ನಶಿಸಲುಬಹುದು,
ಕಾಲ ಕುಟಿಲವೀ ಮಧುಶಾಲಾ!

೬೨. ಇಂದು ಸಿಕ್ಕಿರಲು ಸದವಕಾಶವು ತಾನೇ
ಎಂತು ಸವಿಯದಿರಲೀ ಹಾಲಾ?
ಸುಸಂಧಿ ಇಂದೇ ದೊರೆತಿರಲು ತಾನೇ
ಏಕಿಳಿಸಬಾರದೀ ಪ್ಯಾಲಾ?;
ಇಂದು ತೃಪ್ತಿಯಾಗುವವರೆಗೂ
ಎಂತು ಕಾಡಿಸದಿರಲಿ ಈ ಸಾಕಿಯನು?

ಒಂದೇ ಬಾರಿಯೆ ದೊರೆಯುವುದಿದು
ಪ್ರತಿ ಜೀವನಕೆ ಈ ಮಧುಶಾಲಾ!

೬೩. ಇಂದು ಸಜೀವವಾಗಿಸಿಕೋ ಪ್ರಿಯೆ,
ನಿನ್ನ ತುಟಿಗಳ ಈ ಮಧು-ಪ್ಯಾಲಾ,
ತುಂಬು ತುಂಬುನೀ ತುಂಬಿಕೋ ಅದರಲಿ
ಯೌವನ ಮಧುರಸದಾ ಹಾಲಾ;
ಇನ್ನು, ನನ್ನೀ ತುಟಿಗಳಿಗೆ ತಾ ನಿನ್ನೀ ತುಟಿಗಳನು
ಇನ್ನೀ ತುಟಿಯಿಂ ತೆಗೆವುದ ಮರೆ, ನಿನ್ನೀ ತುಟಿಗಳನು
ದಣಿವಿಲ್ಲದನಾಗಲಿ ನಾ ಮಧು ಹೀರುತಲಿ
ತೆರೆ-ತೆರೆಯಲಿನ್ನೀ ಪ್ರಣಯದ ಮಧುಶಾಲಾ

೬೪. ಸುಮುಖೀ, ನಿನ್ನೀ ಸುಂದರ ಮುಖವೇ
ನನಗಾಗಿದೆ ಹೊನ್ನಿನ ಮಧುಪ್ಯಾಲಾ,
ತುಳುಕುತಲಿದೆ ನಿನ್ನೀ ಮುಖದಲಿ ಮಾಣಿಕ-
ರೂಪದ, ಸುಮಧುರ ಮಧು ಮಾದಕ ಹಾಲಾ;
ನಾನೇ ಆಗುವೆ ಸಾಕಿ ಇಂದು, ನಾನೇ
ಆಗುವೆ ಪೀನೇವಾಲಾ;
ನಾನೂ ನೀನೂ ಎಲ್ಲಿ ಕುಳಿತಿರುವೆವೊ, ಅಲ್ಲೇ
ತಾನೂ ಕುಳಿತಿರುವುದು ಮಧುಶಾಲಾ!

೬೫. ಎರಡೇ ದಿನ ಮಧುವೆನಗೆ ಕುಡಿಸಿ
ಖುಷಿಪಟ್ಟಳು ಸಾಕೀ ಬಾಲಾ
ತುಂಬುತಲವಳು ಚೆಲ್ಲುತಲಿಹಳು
ನನ್ನೆದುರಲೇ ಈ ಪ್ಯಾಲಾ
ಒನಪು ಒಯ್ಯಾರ, ಬಿಂಕ ಬಿನ್ನಾಣಗಳಿಂದೀಗ
ಅಯ್ಯೋ, ಕುಡಿಸಲು ಹಿಂಜರಿಯುತಲಿಹಳು;
ಇನ್ನೇನು? ತನ್ನ ಕರ್ತವ್ಯವ ತಾ-
ಮುಗಿಸುವುದೆನಗೆ ಈ ಮಧುಶಾಲಾ!

೬೬. ಕಿರಿದೀ ಜೀವನದಲಿ ಎನಿತು
ಪ್ರೀತಿಸಲಿ? ನಾ ಕುಡಿಯಲಿ ಹಾಲಾ?
ಬರುಬರುತಲೆ ಈ ಜಗದಲಿ ನಾನು
ಅನ್ನಿಸಿಕೊಂಡೆನು 'ಜಾನೇವಾಲಾ'!
ಸ್ವಾಗತದಾ ಜತೆಜತೆಯಲಿ ತಯ್ಯಾರಿ-
ಬೀಳ್ಕೊಡುಗೆಯದೂ ನಡೆಯುತಿದೆ!

ತೆರೆ-ತೆರೆಯುತಲೆ ಮುಚ್ಚುತಲಿದೆ
ನನ್ನೀ ಜೀವನ ಮಧುಶಾಲಾ!

೧೭. ಕುಡಿವುದೆನಿತು? ಅದ್ವೈತನಾಗುವ ತನಕ,
ಕುಡಿವೆನು ಪ್ಯಾಲೆಯ ಮೇಲೆ ಪ್ಯಾಲಾ,
ಬದುಕುವುದೆನಿತು? ನಿಶ್ಚಿತನಾಗುವ ತನಕ-
ಜತೆಯಲೆ ಇರಲೀ ಸಾಕೀ ಬಾಲಾ;
ಅಯ್ಯೋ, ಕಳೆವ ಭಯವೂ ಉಂಟಾಗುತಿದೆ
ಪಡೆವ ಸುಖದಾ ಹಿಂದೇನೇ!
ದೊರೆವಾನಂದವನೂ ದೊರಕಿಸದೆನಗೆ
ದೊರೆತು ಎನಗೀ ಮಧುಶಾಲಾ!

೧೮. ಕುಡಿಸಲೆನಗೆ ತಂದಿಹೆಯಾ ನೀ
ಇನಿತು ಅಲ್ಪ, ಅತ್ಯಲ್ಪ ಹಾಲಾ?
ತೋರಿಸಲೆನಗೆ ತಂದಿಹೆಯಾ ನೀ
ಈ ಒಡೆದ ಚೂರಿನ ಪ್ಯಾಲಾ?
ಕುಡಿದಿನಿತನು ತೃಪ್ತನಾಗುದಕಿಂತ
ಸಾಗರದೆದುರಲಿ ಸಾವುದೆ ಲೇಸು;
ಸಿಂಧು-ತೃಷೆಯನ್ನಿತ್ತನಾವನು, ರಚಿಸಿ-
ಬಿಂದು-ಸಮವೀ ಮಧುಶಾಲಾ?!

೧೯. ಏನು ಹೇಳುವಿಯೋ ನೀನು? ಇನ್ನೇನೂ ಇಲ್ಲ-
ಭೋಗಿಸಲು ನಿನಗೆ ಹಾಲಾ!
ಏನು ಹೇಳುವಿಯೋ ನೀನು? ಇನ್ನಂತೂ ಇಲ್ಲ-
ಮಾದಕ ಪ್ಯಾಲೆಗಳಾ ಸರಮಾಲಾ!
ಕುಡಿದಿಷ್ಟನೆ ದಾಹ-ಹೆಚ್ಚಿತು, ಎಂದರೆ,
ಶೇಷವೇನೂ ಇಲ್ಲ ಕುಡಿಯಲಿಕೆ!
ತೃಷೆಯನು ನಶಿಸಲು ಕರೆಯುತ ನನ್ನನು
ಚಿರ ತೃಷಿತನ ಗೈವುದು ಈ ಮಧುಶಾಲಾ!!

೨೦. ಭಾಗ್ಯದೊಳೆನಿತು ಬರೆದಿದೆಯೋ
ದೊರೆವುದನಿತೇ ಹಾಲಾ,
ಭಾಗ್ಯದೊಳೆಂತು ಬರೆದಿದೆಯೋ
ಅಂತೇ ದೊರೆವುದು ಮಧು ಪ್ಯಾಲಾ,
ಹೊಯ್ಕೋ ಬಡ್ಕೋ ಸಾವಿರಸಲ ನೀನು!
ಅದರಿಂದಾಗುವುದಾದರೂ ಏನು?
ಭಾಗ್ಯದೊಳಾವುದು ಬರೆದಿದೆಯೋ,
ದೊರೆವುದದುವೇ ಮಧುಶಾಲಾ!

೨೧. ಮಾಡು ಮಾಡು ಮಾಡು ನೀ ಜಿಪುಣತೆ
ಹಾಕುವಲ್ಲಿ ನನಗೆ ಈ ಹಾಲಾ,
ಕೊಡುತ ಕೊಳ್ಳು ನೀ, ಕೊಟ್ಟು ಕೊಳ್ಳು ನೀ
ಈ ಒಡೆದ ಮುರುಕು ಪ್ಯಾಲಾ,
ಇದಕಾಗಿಯೆ ನಾನಿನ್ನೂ ತಡೆದಿಹೆನೋ!
ನನಗೇ ಕೆಡುಕೆನಿಸುವುದಾ ಮೇಲೆ!
ನಾನಿಲ್ಲದೆ ಹೋದ ಗಳಿಗೆಯಲಿ
ನೆನೆವುದೆನ್ನನೀ ಮಧುಶಾಲಾ!

೨೨. ಮಾನಾಪಮಾನಗಳ ಧ್ಯಾನವ-
ಬಿಟ್ಟೆನು, ಕುಡಿಯುತಲೇ ಹಾಲಾ,
ಅಭಿಮಾನವ ಮರೆತೆನು, ಬರುತಲೇ-
ಕೈಯಲಿ ಮಣ್ಣಿನ ಈ ಪ್ಯಾಲಾ;
ಒಯ್ಯಾರದ ಸಾಕಿಯು ಒಮ್ಮೊಮ್ಮೆ
ಬಯ್ಯಲು ತಾನಪಮಾನವೆ?
ಜಗದೆಲ್ಲಾ ಅಪಮಾನವನೆದುರಿಸಿ,
ಪಡೆದಿಹೆ ನಾನೀ ಮಧುಶಾಲಾ!

೨೩. ಕ್ಷೀಣ ಕ್ಷುದ್ರ ಕ್ಷಣಭಂಗುರ ದುರ್ಬಲ
ಮಾನವನೇ ಈ ಮಣ್ಣಿನ ಪ್ಯಾಲಾ,
ತುಂಬಿಹುದದರ ಒಳಗಡೆ ಎಲ್ಲ
ಕಟುಮಧುವೇ ಈ ಜೀವನದಾ ಹಾಲಾ;
ಮೃತ್ಯುವೇ ತಾ ನಿರ್ದಯ ಸಾಕಿ-
ಯಾಗಿ, ನಿಂತಿಹಳು ಸಾವಿರ ಕೈಚಾಚಿ
ಕಾಲ ಪ್ರಬಲವೈ ಪೀನೇವಾಲಾ
ಸಂಸ್ಕೃತಿಯೋ ಇದು ಮಧುಶಾಲಾ!

೨೪. ಪ್ಯಾಲೆಯಂತೆ ಹೂಳಿ ನಮ್ಮನು ಯಾರೋ
ತುಂಬಿದರೋ ಜೀವನದ-ಹಾಲಾ
ನಿಶೆಯಾಗಲೇ ಇಲ್ಲ, ಇಳಿಇಳಿಸಿದರೂ
ಕೊಳ್ಳುತ ಮಧುವಿನ ಸರ-ಪ್ಯಾಲಾ;
ಜೀವನದಾ ಈ ನೋವೇಳುತಲೇ
ಒತ್ತಿದೆವದನೀ ಪ್ಯಾಲೆಗಳಿಂದ,
ಜಗಕಿಂತಲೂ ಮೊದಲೇ, ಈ ಸಾಕಿಯ ಒಡನೆ-
ಜೂಜಾಡುತಲಿದೆ ಈ ಮಧುಶಾಲಾ!

೨೫. ನಮ್ಮೀ ದ್ರಾಕ್ಷಿಗಳಿಂದಲೇ ದೇಹದಿ
ತುಂಬಿ ಕೊಂಡಿಹೆವೋ ನಾವ್ ಹಾಲಾ,

ಏನು ಹೇಳುವಿಯೋ ಶೇಖ, ನೀ, ನರಕದಿ-
ನಮ್ಮನು, ತಪಿಸುವುದೀ ಜ್ವಾಲಾ?
ಹಾಗಿದ್ದರೆ ಇನ್ನೂ ಎಳೆವೆನು ಮಧುವ
ಇನ್ನಾರೂ ಕುಡಿಯದ ಹಾಗೆ
ಆಗ, ಆ ನರಕದ ಜ್ವಾಲೆಯ ಒಳಗೂ
ಕಾಣುವುದೆಮಗೀ ಮಧುಶಾಲಾ!

೭೬. ಯಮ ಬಂದೆನ್ನನು ಎಳೆದೊಯ್ಯುತಲಿರಲು
ಕುಣಿಯುತ ಹೊರಡುವೆ, ಕುಡಿಯುತ ಹಾಲಾ,
ನರಕದ ಪೀಡಾ ಸಂಕಟಗಳನು
ಮರೆಪುದು, ಮತ್ತಲಿ ಈ ಸುಮಧುರ ಹಾಲಾ;
ಕ್ರೂರ ಕಠೋರ ಕುಟಿಲ ಕುವಿಚಾರಿ
ಅನ್ಯಾಯಿ, ಆ ಯಮರಾಜನು ಕೊಡುವ
ಏಟುಗಳೆನ್ನ ಮೇಗಡೆ ಬೀಳಲು
ನೋವಾಗಿಸದೀ ಮಧುಶಾಲಾ!

೭೭. ಈ ತುಟಿಗಳಿಂದೆಂದಾದರು ಎರಡು
ಪ್ರೇಮದ ಮಾತಾಡಿದರೀ ಹಾಲಾ,
ಈ ಖಾಲೀ ಕೈಗಳ ಮನವನಿನಿತು
ಕ್ಷಣವಾದರೂ ತುಂಬಿದರೀ ಪ್ಯಾಲಾ,
ಹಾನಿ ನಿನಗೇನಾಯಿತು ಜಗವೇ?
ವ್ಯರ್ಥ ಬಯ್ಯದಿರೋ ನೀ ನನ್ನ!
ಮುರಿದಾ ನನ್ನೀ ಮನಕಿದು ಒಂದೇ
ಆಗಿದೆ ಆಟಿಕೆ ಮಧುಶಾಲಾ!

೭೮. ನೆನಪಾಗದೆ ಇರಲಿ ದುಃಖಮಯ ಜೀವನ
ಇದಕಾಗಿಯೆ ಕುಡಿವೆನು ನಾನೀ ಹಾಲಾ,
ಜಗ ಚಿಂತೆಗಳಿಂದಿರಲು, ನಾ ಮುಕ್ತ,
ಎತ್ತಿಕೊಳುವೆನು ಕೈಯಲಿ ಈ ಪ್ಯಾಲಾ,
ರುಚಿಯಭಿರುಚಿಗಾಗಿ, ಸಿದ್ಧಿ-ಸಾಧನೆಗಾಗಿ
ಜಗವಿದ ಕುಡಿಯುತಲಿರುತಿಹುದು;
ಆದರೆ, ನಾನಂತೂ, ಆ ರೋಗಿಯೋ ಗೆಳೆಯ:
ನನಗಿದುವೊಂದೇ ಔಷಧಿ-ಮಧುಶಾಲಾ!

೭೯. ದಿನಪ್ರತಿದಿನವೂ ಬೀಳುತ ಹೊರಟಿವೆ
ಪ್ರಣಯಿನಿ ಪ್ರಾಣಗಳು ಈ ಹಾಲಾ,
ಭಗ್ನವಾಗುತಿದೆ ದಿನಪ್ರತಿದಿನವೂ
ಪ್ರಿಯೆ, ನನ್ನೀ ತನು ಪ್ಯಾಲಾ,

ದೂರಾಗುತಿದೆ ನನ್ನಿಂದ, ರೂಪಸಿ-
ದಿನದಿನವೂ ಯೌವನ-ಸಾಕೀಬಾಲಾ,
ಒಣಗುತಲಿದೆ ದಿನದಿನವೂ, ಸುಂದರಿ-
ನನ್ನೀ ಜೀವನ ಮಧುಶಾಲಾ!

೮೦. ಯಮಬರುವನು ತಾ ಸಾಕಿಯಾಗಿ
ಹಿಡಿದು ಕೈಯಲಿ ಕರಿ-ಹಾಲಾ,
ಕುಡಿದೆನೆಂದರೆ ಎಚ್ಚರವೇ ಆಗದು
ಸುರಾ ವಿಶುದ್ಧ ಮತ್ತಿನ ಈ ಮತವಾಲಾ,
ಕೊನೆಯ ಮೂರ್ಛೆ ಇದು, ಇವಳೇ
ಕೊನೆಯ ಸಾಕಿ, ಇದುವೇ ಕೊನೆಯ ಪ್ಯಾಲಾ
ಪ್ರೀತಿಯಿಂ ಕುಡಿಯೋ ಪಥಿಕನೆ ಇದನು,
ಮತ್ತೆ ದೊರೆಯದೀ ಮಧುಶಾಲಾ!

೮೧. ತುಳುಕುತಲಿರುವುದು ತನು ಘಟದಿಂದ
ತುಂಬಿದ ಮೇಲೀ ಜೀವನ-ಹಾಲಾ,
ಬರುತಲಿರುವಳು ಪ್ರಿಯೆ, ಅಂತಿಮ ಸಾಕಿ
ಹಿಡಿದು ಕೈಯಲಿ ವಿಷ ಪ್ಯಾಲಾ;
ಕೈ ಮರೆವುದು ಪ್ಯಾಲೆಯ ಸ್ಪರ್ಶವನು
ನಾಲಿಗೆ ಮರೆವುದು ಸುರೆಯಾ ಹರ್ಷವನು,
ಕಿವಿಯಲಿ ನೀನಿದ ಹೇಳುತಿರು:
"ಮಧುಕಣ, ಪ್ಯಾಲಾ, ಮಧುಶಾಲಾ!"

೮೨. ನನ್ನೀ ತುಟಿಯ ಮೇಲಿರಲಿ, ಅಂತಿಮ-
ವಸ್ತು: ತುಳಸೀದಳವಲ್ಲ; ಮಧುಪ್ಯಾಲಾ;
ನನ್ನೀ ನಾಲಿಗೆಯ ಮೇಲಿರಲಿ, ಅಂತಿಮ
ವಸ್ತು : ಗಂಗಾಜಲವಲ್ಲ; ಹಾಲಾ
ನನ್ನ ಶವವನು ಹೊತ್ತು ಬರುವಾ
ನನ್ನವರೇ ಇದ ನೆನಪಿಡಿರಿ
"ರಾಮನಾಮವೇ ಸತ್ಯ-ವೆನ್ನದೇ,
ಅನ್ನಿರೆಲ್ಲರೂ: ಸತ್ಯವೀ ಮಧುಶಾಲಾ!"

೮೩. ನನ್ನ ಶವದ ಮೇಲವರೇ ಅಳಲಿ:
ಸುರಿಸುವವಾರ ಕಂಗಳೋ-ಹಾಲಾ,
ನಿಟ್ಟುಸಿರಬಿಟ್ಟರೆ, ಮದಿರೆಯ ಕುಡಿದ
ಬಾಯಿಂ ಬರಲಿ ಸುರಭಿತ ಹಾಲಾ,
ಅವರೇ ಹೆಗಲನು ಕೊಡಲೆನಗೆ:
ಯಾರ ಪದ-ಮದ-ತಡಬಡಿಸುವವೋ;

ಸುಡಿರಲ್ಲಿಯೇ ಕೊಂಡು ಹೋಗಿ ನನ್ನ:
ಇದ್ದಲ್ಲಿ ಒಮ್ಮೆ ಮಧುಶಾಲಾ!

೮೪. ಇನ್ನು, ಚಿತೆಯ ಮೇಲೆ ಸುರಿಯದಿರಿ ತುಪ್ಪವ,
ಸುರಿಯಿರಿ ಹಾಲಾ ತುಂಬಿದ ಪ್ಯಾಲಾ,
ದ್ರಾಕ್ಷಿಯ ಬಳ್ಳಿಯ ಗಂಟನು ಕಟ್ಟಿರಿ,
ಜಲ ಬೇಡ, ಮಧ್ಯದಿ, ಇರಲಿ ಬರಿ ಹಾಲಾ;
ಪ್ರಾಣಪ್ರಿಯೆ, ಶ್ರಾದ್ಧವ ನೀನು ಮಾಡುವಿಯಾದರೆ,
ನಾ ಹೇಳುವೆ ಕೇಳಾ ಬಗೆಯನ್ನು:
ಕುಡಿವವರೆಲ್ಲರ ಕರೆಸಿ ನೀನು,
ಬಾಗಿಲು ತೆರೆಯಿಸಿಬಿಡು ಈ ಮಧುಶಾಲಾ!

೮೫. ಹೆಸರೇನಾದರೂ ಕೇಳಿದರಾದರೆ
ಹೇಳಿಷ್ಟೆ : 'ಅವ - ಪೀನೇವಾಲಾ',
ಕೆಲಸ ಒಂದೇ : ಹನಿಸುತಲಿರುವುದು
ಎಲ್ಲರಿಗೂ ಈ ಮಧುಪ್ಯಾಲಾ!
ಜಾತಿಯನೇನಾದರೂ ಕೇಳಿದರೆಂದರೆ, ಪ್ರಿಯೆ,
ಹೇಳಿಬಿಡು ನೀ-ಹುಚ್ಚರದೆಂದು
ಪ್ಯಾಲೆಗಳಾ ಸರಮಾಲೆಯ ಜಪಿಸುವ-
ಧರ್ಮದವನೆನ್ನು, ಸ್ಥಳ : ಮಧುಶಾಲಾ!

೮೬. ಯಮಬರುವುದು ತಾ ತಿಳಿಯಿತೆಂದರೆ-
ಹಿಡಿದು ಕೈಯಲಿ ಕರಿ ಹಾಲಾ,
ಗ್ರಂಥವ ಮರೆವರು ಪಂಡಿತರೆಲ್ಲರು
ಸಂತಮಹಂತರು ಮರೆವರು ಮಣಿಮಾಲಾ;
ಪೂಜೆಯ ಮರೆವರು ಪೂಜಾರಿಗಳು,
ಜ್ಞಾನವ ಮರೆವರು ಜ್ಞಾನಿಗಳು,
ಕುಡುಕರು ಮರೆಯರು ಸತ್ತರು ಕೂಡಾ
ಕುಡಿಕುಡಿದಾ ಸುಮಧುರ ಮಧುಶಾಲಾ!!

೮೭. ನನ್ನನ್ನು ಕರೆದು ಯಮ ಒಯ್ಯುವನೆಂದರೆ
ಕರೆತರಲಿ ಜತೆಯಲಿ ಈ ಹಾಲಾ,
ಸಾಕಿಯು ಕೂಡಾ ಜತೆಯಲಿ ಬರಲಿ-
ಹಿಡಿದು ಕೈಯಲಿ ಮಧು ಪ್ಯಾಲಾ;
ಸ್ವರ್ಗ ನರಕಗಳಷ್ಟೇ ಏಕೆ?
ಮನ ಬಂದಲ್ಲಿಗೆ ಎಳೆದೊಯ್ಯಲಿ
ಎಲ್ಲಾ ಸ್ಥಳಗಳೂ ಒಂದೇ ನಮಗೆ
ಜತೆಯಲಿದ್ದರೀ ಮಧುಶಾಲಾ!

೮೮. ಪಾಪವೆನ್ನುವೆಯಾದರೆ ಕುಡಿವುದ
ಸಮದೋಷಿಗಳೀ ಮೂರೂ: ಸಾಕೀಬಾಲಾ,
ನಿತ್ಯ ಕುಡಿಸುವ ಮಧು ಪ್ಯಾಲಾ,
ಮತ್ತೂ, ಕುಡಿವ ಸುಮಧುರ ಹಾಲಾ:
ನಡೆ, ನನ್ನ ಜತೆ ಇವುಗಳನೂ ಕೊಂಡು,
ನ್ಯಾಯವೂ ಇದನೇ ತಾ ಹೇಳುವುದು?
ಬಂಧಿಸಲಾಗುವುದೆಲ್ಲಿಯೋ ನನ್ನ
ಅಲ್ಲಿಯೇ ಬಂಧಿಸಿರಿ ನನ್ನೀ ಮಧುಶಾಲಾ!

೮೯. ಶಾಂತವಾಗಿದೆಯಾ ಈವರೆಗೂ ಸಾಕಿ-
ಕುಡಿದಾವುದಾದರೂ ಎದೆಯಜ್ವಾಲಾ?
ಹಾಕು ಹಾಕೆಂದವರೇ ಎಲ್ಲರೂ, ಸಾಕೀ,
ಸಾಕೆಂದಿಹರಾರೀ ಮಧುಪ್ಯಾಲಾ?
ಎನಿತೋ ಆಸೆಗಳನಿಲ್ಲಿಯೆ ಬಿಟ್ಟು
ಹೊರಡುವರೆಲ್ಲರು ಇಲ್ಲಿಂದ
ಎನಿತೋ ಆಸೆಗಳಿಂದ ನಿಂತಿದೆ-
ಮಸಣವಾಗಿ ಈ ಮಧುಶಾಲಾ!

೯೦. ಯಾವ ಹಾಲಾ ನಾ ಬಯಸುತಲಿದ್ದೆನೊ
ದೊರೆಯಲಿಲ್ಲೆನಗೆ ಆ ಹಾಲಾ,
ಯಾವ ಪ್ಯಾಲೆಯ ನಾ ಕೇಳುತಲಿದ್ದೆನೊ
ದೊರೆಯಲಿ ಎನಗೆ ಆ ಪ್ಯಾಲಾ,
ಯಾವ ಸಾಕಿಗೆ ನಾ ಮರುಳಾಗಿದ್ದೆನೊ
ದೊರೆಯಲಿಲ್ಲವೋ ಅವಳೆನಗೆ;
ಹುಚ್ಚಾಗಿ ತಿರುಗಿದೆ ನಾನಾವುದಕೋ
ಅಯ್ಯೋ, ದೊರಯಲಿಲ್ಲವಾ ಮಧುಶಾಲಾ!!

೯೧. ಕಣ್ಮುಂದೇ ನಾ ನೋಡುತಲಿಹೆನು
ಮಾಣಿಕದಂತಿಹ ಈ ಹಾಲಾ,
ಕಣ್ಮುಂದೇ ನಾ ನೋಡುತಲಿಹೆನು
ಹೊನ್ನಲಿ ಮಾಡಿದ ಮಧುಪ್ಯಾಲಾ,
'ಆಯಿತು, ಇನ್ನೇನು ದೊರೆಯಿತು!' ಎನ್ನುತ
ಹಿಡಿಯಲೋಡುತಿಹೆ ನಾನೆಂದಿಂದ!
ಕಣ್ಮುಂದೇ ಕಾಣುವ ದೂರ ಕ್ಷಿತಿಜದೊಲು
ದೂರಾಗುತಲಿದೆ ನನ್ನೀ ಮಧುಶಾಲಾ!

೯೨. ನಿರಾಶೆಯ ತಮವೆಂದಾದರೂ ಕವಿದರೆ,
ಮರೆಯಾಗುವುದಂದು ಮಧುಪ್ಯಾಲಾ,
ಮರೆಯಾಗುವುದಂದೇ ಮದಿರೆಯ ಕಾಂತಿ,
ಮರೆಯಾಗುವಳಂದೇ ಸಾಕೀ ಬಾಲಾ;
ಎಂದೇ ಬೆಳಗು ಆಸೆಯ ಹಚ್ಚುತ
ಪ್ಯಾಲೆಯ ಮಿನುಗಿಸಿ ಹೋಗುವುದು!
ಕಣ್ಣುಮುಚ್ಚಾಲೆಯ ಆಡುತಲಿರುವುದು
ನನ್ನೊಡನೆಯೆ ನನ್ನೀ ಮಧುಶಾಲಾ!!

೯೩. 'ಬಾ ಮುಂದಕೆ' ಎನ್ನುತ ಹಿಂದಕೆ
ತಾ ಸರಿಯುವಳೋ ಸಾಕೀಬಾಲಾ,
ತುಟಿಯನು ಹಚ್ಚಲು ಹೇಳುತ, ಪ್ರತಿ-
ಬಾರಿಗೂ, ತೆಗೆವಳು-ಮಧುಪ್ಯಾಲಾ;
ಎಲ್ಲಿಗೆ ನನ್ನನು ಕೊಂಡೊಯ್ಯುವುದೋ-
ಇದು? ನಾನು ಅರಿಯೆನೋ ಇದನು,
ಕಳಿ-ಕಳಿಸುತ ಕಳಿಸುತ ಮುಂದಕೆ ನನ್ನ
ತಾ ಹಿಂದಕೆ ಸರಿಯುತಿದೆ, ಈ ಮಧುಶಾಲಾ!

೯೪. ಕೈಯಲಿ ಬರುಬರುತಲೆ ಅಯ್ಯೋ,
ಕೈ ಜಾರುತಿದೆ ಈ ಮಧುಪ್ಯಾಲಾ;
ತುಟಿಗಳ ಮೇಲೆ ಬರುಬರುತಲೆ ಅಯ್ಯೋ
ತುಳುಕುತ ಹೊರಟಿದೆ ಈ ಹಾಲಾ;
ಜಗಜನರೇ ನೀವ್ ನೋಡಿರಿ ಬಂದು
ನಾ ಬರೆಸಿಗೊಂಡಿಹ ಭಾಗ್ಯವನು!
ದೊರೆದೊರೆಯುತ ದೊರೆಯುತಲೇ ತಾ-
ದೂರಾಗುತಲಿದೆ ಈ ಮಧುಶಾಲಾ!

೯೫. ಪ್ರಾಪ್ಯವಲ್ಲದಿದ್ದರೆ ಏಕೆ
ಲುಪ್ತವಾಗದೀ ಪ್ಯಾಲಾ?
ಪ್ರಾಪ್ಯವಲ್ಲದಿದ್ದರೆ ಏಕೆ
ಲುಪ್ತವಾಗದೀ ಹಾಲಾ?
ಛೆ! ಇನಿತು ನಿರಾಶೆಯ ಪಡೆ ನಾನು!
ಬಲ್ಲೆನು, ಏನೂ ಪಡೆಯೆನು ನಾನು!
ವ್ಯರ್ಥ ಓಡಿಸುತಲಿದೆ ಮರುಭೂಮಿಯಲಿ
ಮೃಗಜಲವಾಗಿ ನನ್ನೀ ಮಧುಶಾಲಾ!!

೯೬. ದೊರೆಯುದಿದ್ದರೆ ಬೇಡ, ಆದರೆ, ಆಸೆಯ ತೋರಿಸಿ
ವ್ಯಾಕುಲಗೊಳಿಸುತಲಿದೆ ಏಕೀ ಹಾಲಾ!
ದೊರೆಯುದಿದ್ದರೆ ಬೇಡ, ಆದರೆ, ಚಮರತ-
ಚಡಪಡಿಸುತಲಿದೆ ಏಕೀ ಪ್ಯಾಲಾ?
ಅಯ್ಯೋ, ನಿಯತ್ತಿನ ಈ ವಿಷಮ ಲೇಖನಿ
ಹಣೆಯಲಿ ಕೆತ್ತಿ ಹೋಯಿತೇ ಲೇಖಕನು?
"ದೂರವಿರುವುದು ಇನ್ನೂ ಮಧುವಿನ ಧಾರೆ
ಬಳಿಯಲ್ಲಿರುವುದು ಇದುವೇ ಮಧುಶಾಲಾ"!

೯೭. ಮದಿರಾಲಯದಲಿ ಕುಳಿತು, ಕಳೆದೆನೆಷ್ಟೋ ಹೊತ್ತು
ಆದರೂ, ಕುಡಿವುದಾಗಲಿಲ್ಲ ಹನಿ-ಹಾಲಾ,
ಎಷ್ಟೋ ಯತ್ನವಮಾಡಿ ತುಂಬಿದರೂ, ಯಾಕೋ-
ಪಲ್ಲಟಿಸುತಿಹರಾರೋ ಎನ್ನೀ ಮಧುಪ್ಯಾಲಾ,
'ಮಾನವ ಬಲದೆದುರಲಿ ಭಾಗ್ಯ ತಾ ನಿರ್ಬಲ'
ಪೇಳುವನು, ಕೇಳಿದ್ದೆ ನಾ ವಿದ್ಯಾಲಯದಿ;
'ಭಾಗ್ಯ ಪ್ರಬಲ-ಮಾನವ ನಿರ್ಬಲ'ದ,
ಪಾಠ ಕಲಿಸುತಿದೆ ಈ ಮಧುಶಾಲಾ!

೯೮. ಭಾಗ್ಯದಿ ಬರೆದಿರೆ ಬ್ರಹ್ಮಕಪಾಲ
ಹುಡುಕುತಲಿದ್ದೆನು ಮಧು ಪ್ಯಾಲಾ;
ಹುಡುಕುತಲಿದ್ದೆನು ಮೃಗ ನಯನೆಯ ನಾ
ಭಾಗ್ಯದೊಳಿತ್ತು: ಮೃಗಛಾಲಾ!
ತಮ್ಮ ಭಾಗ್ಯವ ತಿಳಿವಲ್ಲಿ ತಾವು
ನನ್ನಪೊಲಾರು ವಂಚಿತರು?
ಭಾಗ್ಯದಿ ಬರೆದಿರೆ ಬಣಬಣ ಮಸಣ
ನಾ ಹುಡುಕುತಲಿದ್ದೆನು ಮಧುಶಾಲಾ!

೯೯. ಅಂಗೈಯೊಳಗಿನ ಪ್ಯಾಲೆಯ ಮರೆತು
ನಾ ಬಯಸುವೆ ದೂರದ ಪ್ಯಾಲಾ,
ತುಟಿಯಲಿ ತಂಗಿದ ಹಾಲಾ ಮರೆತು
ಪ್ರೀತಿಸುವೆನು ನಾ, ತಟದಾಚೆಯ ಹಾಲಾ;
ಪಡೆದನುಭವಿಸುವಲಿ ಪ್ರೀತಿಯೆ ಇಲ್ಲ
ಪ್ರೀತಿ ಇರುವುದು ಪಡೆವಾ ಆಸೆಯಲಿ!
ಆಗಲೀ ನಾ, ಪಡೆದಿದ್ದೆನೆಂದರೆ, ಈಗಿಸಿತು-
ಪ್ರಿಯವಾಗುತಿರಲಿಲ್ಲ ವೀ ಮಧುಶಾಲಾ!

೧೦೦. ಸಾಕಿಯ ಬಳಿ ಇನಿತಾದರೂ ಇದೆ-
ಶ್ರೀ ಸುಖ ಸಂಪತ್ತಿಯ ಹಾಲಾ,
ಜಗಕೆಲ್ಲಾ ಇದೆ ಕುಡಿಯಲು ಆತುರ
ಹಿಡಿದು ಕೈಯಲಿ ಪಣಬರಹದ ಪ್ಯಾಲಾ:
ರೇಲುಗೀಲುಗಳೇನಾದರೂ ಮಿಸುಗಲು
ಬಿದ್ದು ಬಿದ್ದು ಜನ ಸಾಯುವರು;
ಜೀವನ ಸಂಘರ್ಷವೆ ಇಲ್ಲಿಲ್ಲ
ಜನ-ಜಾತ್ರೆಯಾಗಿದೆ ಮಧುಶಾಲಾ!

೧೦೧. ನಿನ್ನ ಬಳಿಯಲಿ ಇರುವುದು ಸಾಕಿ,
ಇನಿತು ಅಲ್ಪವೀ ಹಾಲಾ,
ಕುಡಿವಭಿಲಾಷೆಯಿಂದೇತಕೆ ನೀನು
ಮತ್ತರಿಸಿ ಗೈಯುವೆ - ಮತವಾಲಾ?
ನುಚ್ಚಾಗುತ ನುರಿಯುತ ನಾ ಸಾಯುತಲಿಹೆನು
ಮರೆಯಲಿ ಮುಸು ಮುಸು ನೀ ನಗುತಿರವೆ
ಅಯ್ಯೋ, ನನ್ನೀ ಪೀಡೆಯ ಕೊಂಡು
ತಾ ಕ್ರೀಡಿಸುತಿರುವಳು ಮಧುಶಾಲಾ!!

೧೦೨. ಸಾಕಿ, ಸತ್ತನಂತರ ಅದಾವನು
ಮುಂದಕೆ ಚಾಚಿಹನೀ ಪ್ಯಾಲಾ?
ಎರಡು ಹನಿಗಿಂತ ಅಧಿಕ
ಕುಡಿಯಲಿಲ್ಲಾರೂ ನಿನ್ನ ಹಾಲಾ;
ಅಯ್ಯೋ, ಇಡೀ ಜೀವನದಾ ಪರಿಶ್ರಮವೆಲ್ಲಾ
ಕೊಳ್ಳೆ ಹೊಡೆದವೀ ಹನಿ ಎರಡು,
ಮುಗ್ಧ ಮಾನವರ ವಂಚಿಸುವಾ
ವಂಚಕಿಯಾಗಿದೆ ಈ ಮಧುಶಾಲಾ!

೧೦೩. ತೃಷೆಯನು ತಂದಾರಿಟ್ಟರೊ ಎನಗೆ
ಚಿರಬಾಳಲಿ ಆ ಹಾಲಾ!
ಜೀವನದುದ್ದಕೂ ಓಡಿಸಿದರಾರೋ ನನ್ನನ್ನು
ಚಿರಬಾಳಲಿ ಆ ಸುರಪ್ಯಾಲಾ!
ಮತ್ತಿನವರ ಮುಖದಿಂದ
ಶಾಪ ಹೊರಡದು ಎಂದೂ;
ಯಾರೆನ್ನನು ದುಃಖಿಯ ಮಾಡಿಹರೋ
ಚಿರಸುಖಿಯಾಗಿರಲಾ ಮಧುಶಾಲಾ!

೧೦೪. ಮನಸಿಲ್ಲೆನಗೆ ಮುಂದಕೆ ಹೋಗಿ
ಕಸಿದು ಕೊಳ್ಳಲು ಇತರರ ಹಾಲಾ,

ಬಯಸದು ಮನವು: ತಳ್ಳುತ ಜನರ
ಕೊಳ್ಳಲು ಇತರರ ಮಧುಪ್ಯಾಲಾ,
ಸಾಕೀ, ನೋಡದದಿರೆನ್ನನು ನೀನು,
ನನಗಿನಿತೂ ದುಃಖವದಿಲ್ಲ;
ಇಷ್ಟೇ ಏನು? ನಾ ಮುಚ್ಚಿದ ಕಣ್ಣಲಿ
ನೋಡುತಲಿರುವೆನು ಮಧುಶಾಲಾ!!

೧೦೫. ಮದ ಮದಿರಾ ಮಧು ಹಾಲಾ-ಇವ
ಕೇಳುತಲೇ ನಾನಗಿಹೆ ಮತವಾಲಾ,
ತುಟಿಯ ಮೇಗಡೆ ಬಂದರೆ-
ಗತಿಯೇನು, ಈ ಮಧುಪ್ಯಾಲಾ?
ಸಾಕೀ, ನೀ ಬರದಿರು ನನ್ನ ಬಳಿಯಲ್ಲಿ,
ನಾ ಪೂರ್ಣ ಹುಚ್ಚನಾಗುವೆನು;
ತೃಷೆಯಲಿ ನಾನಾಗಿಹೆ ಮತ್ತ
ಶುಭ ನಿನಗೇ ಆಗಲಿ ಮಧುಶಾಲಾ!

೧೦೬. ನನಗೇನಾವಶ್ಯಕತೆಯಿದೆ, ಸಾಕಿಯ?
ಏನ ಕೇಳಲಿ ನಾ ಹಾಲಾ?
ಏನಾವಶ್ಯಕತೆಯಿದೆ ನನಗೆ?
ಸಾಕಿಯಿಂದಲೇ ಕುಡಿಯಲು ಪ್ಯಾಲಾ!
ಕುಡಿದು ಮದಿರೆಯ, ನಾ ಮತ್ತನಾದರೆ,
ಮದಿರೆಯ ಪ್ರೇಮಿಸಿದಂತಾಯ್ತು?
ನಾನಂತೂ ಹುಚ್ಚಾಗಿಯೆ ಬಿಡುವೆನು
ಬರಿ, ಕೇಳುತಲೇ ಈ ಮಧುಶಾಲಾ!

೧೦೭. ನನಗೇನನು ಕೊಡಬೇಕಾಗಿತ್ತೋ
ಕೊಡಲಿಲ್ಲದನು ಈ ಹಾಲಾ,
ನನಗೇನನು ಕೊಡಬೇಕಾಗಿತ್ತೋ
ಕೊಡಲಿಲ್ಲದನು ಈ ಪ್ಯಾಲಾ;
ಮನುಜನ ದುರ್ಬಲತೆಯನರಿತು,
ಯಾರಿಗೇನನೂ ಹೇಳೆನು ನಾನು;
ಆದರೆ, ನನ್ನನೆ ನೋಡಿ, ನಾಚುತಲಿದೆ
ಏಕೋ ಏನೋ ಈ ಮಧುಶಾಲಾ!

೧೦೮. ಒಂದೊಮ್ಮೆ ನಾ ಬಲು ಸಂತೃಪ್ತಿಯೊಳಿದ್ದೆ
ಪಡೆದು ಈ ಅಲ್ಪಪ್ರಿಯ ಹಾಲಾ,
ಪ್ರಿಯಲತೆಯೊಲು ಮುಗ್ಧಳಿದ್ದಳು ಸಾಕಿ

ಪುಟ್ಟದು ಇನ್ನೂ ಈ ಮಧುಪ್ಯಾಲಾ,
ಈ ಪುಟ್ಟ ಜಗದೊಳು ನನ್ನ
ಈ ಸ್ವರ್ಗವು ರಮಿಸುತಲಿತ್ತು
ವಿಶಾಲ ಜಗದಲಿ, ಅಯ್ಯೋ, ಕಳೆಯಿತು
ನನ್ನೀ ಪುಟ್ಟ ಮಧುಶಾಲಾ!

೧೦೯. ಎನಿತೋ ಮದಿರಾಲಯಗಳ ಕಂಡೆ
ಕಂಡೆನೆನಿತೋ ನಾ ಹಾಲಾ,
ಕುಣಿಯುತ ಕುಣಿಯುತ ಕೈಯಲಿ ಎನಿತೋ-
ಬಂದವು, ಬಣ್ಣ-ಬಣ್ಣದ ಬಹು ಪ್ಯಾಲಾ,
ಒಂದರಿಂದೊಂದು ಮಿಗಿಲಾಗಿ, ಸುಂದರ-
ಸಾಕಿಯು ಗೈದಳು ಸತ್ಕಾರವನು;
ಒಳಗಣ್ಣಲ್ಲಿ ಒಂದೂ ಉಳಿಯಲೇ ಇಲ್ಲ
ಎಲ್ಲಾ, ಮೊದಲಿನಂತೆಯೇ ಈ ಮಧುಶಾಲಾ!

೧೧೦. ಒಂದೊಮ್ಮೆ ನನ್ನ ತುಟಿಯಲಿ ಬಂದು
ತುಳುಕುತಲಿತ್ತು ಈ ಹಾಲಾ,
ಒಂದೊಮ್ಮೆ ನನ್ನ ಕೈಯಲಿ ಕುಳಿತು
ತೂಗುತಲಿತ್ತೀ ಮಧು ಪ್ಯಾಲಾ,
ಒಂದೊಮ್ಮೆ, ಕುಡಿವವನು ನಾನು, ಸಾಕೀ-
ಬಂದಪ್ಪುತಲಿದ್ದಳು ಆಗೆನ್ನ;
ಇಂದಾಗಿಹೆ ನಾ ನಿರ್ಜನ ಮಸಣ,
ಒಂದೊಮ್ಮೆ ನಾನಾಗಿದ್ದೆನೀ ಮಧುಶಾಲಾ!

೧೧೧. ಹೃದಯ ಭಟ್ಟಿಯ ಸುಟ್ಟುನಾ
ಎಳೆದನೋ ಕಣ್ಣೀರಿನ ಹಾಲಾ,
ಚಿಲ್ ಚಿಲ್ ಚಿಲ್ ಚಿಮುಕಿಸುತಿರುವುದು
ಪ್ರತಿನಿಮಿಷವೂ ನಿಮಿಷದ ಪ್ಯಾಲಾ,
ಕಣ್ಣೆನಗಿಂದು ಬಂದಿವೆ ಸಾಕಿ,
ಕೆಂಗುಲಾಬಿಯ ಕುಡಿದು ಕೆನ್ನೆಗಳಾಗಿವೆ,
'ವಿರಹಿ' ಎಂದು ಕರೆಯದಿರೇ ನೀ ನನ್ನ
ನಾ ತಿರುಗುತಲಿರುವ ಮಧು ಶಾಲಾ!

೧೧೨. ಎಷ್ಟು ಬೇಗ ತಾ ಬಣ್ಣ ಬದಲಿಸುವುದು
ಈ ನನ್ನ ಚಂಚಲ ಹಾಲಾ,
ಎಷ್ಟು ಬೇಗ ತಾ ಕೊಸರಿಕೊಂಬುದು
ಕೈಯಲಿ ಬಂದು ನನ್ನೀ ಪ್ಯಾಲಾ,

ಎಷ್ಟುಬೇಗ ಈ ಸುಂದರ ಸಾಕಿಯ
ಆಕರ್ಷಣೆ ನಶಿಸುತ ಹೊರಟಿಹುದು!
ಬೆಳಗೂ ಅಂತಿರಲಿಲ್ಲ: ಎಂತು-
ರಾತ್ರಿಯೊಳಿತ್ತೋ ಮಧುಶಾಲಾ!

೧೧೩. ಹನಿಹನಿಗಾಗಿ ನಿನ್ನನು ಒಮ್ಮೆ
ಹಿಂಡುವುದೋ ಈ ಹಾಲಾ,
ಕೈಯಿಂದೊಮ್ಮೆ ಕಳೆದು ಹೋಗುವುದು
ಈ ನಿನ್ನ ಮಧುಮಾದಕ ಪ್ಯಾಲಾ,
ಕುಡಿವವನೇ, ನೀ ಸಾಕಿಯ ಸವಿ ಸವಿ-
ಮಾತಿಗೆ ಮರುಳಾಗದಿರೋ
ನನ್ನನೂ ತಾ ಹೊಗಳುತಲಿತ್ತು
ಇಂತೆಯೇ ಒಮ್ಮೀ ಮಧುಶಾಲಾ!

೧೧೪. ಮತಗಳ ಪಂಥವ ತೊರೆದೆನು ನಾನು
ನನಗೆಂದಿತು ಆಗ: ಮತ್ತಿನ ಮತವಾಲಾ,
ಕಾಲನು ತೊಳೆಯಲು, ಹಾಲಾ ಹೊರಟಿತು
ಸಿಡಿದೆಪ್ಪು ಒಡೆಯ, - ನಾ ಮಧು ಪ್ಯಾಲಾ,
ಆಗ ತಿಳಿದೆ ನಾ: ನನ್ನನೇ ಇದು
ಹಿಂಬಾಲಿಸುತಿದೆ ಮಧುಶಾಲಾ;
ತೊರೆದೆನೇತಕೆ ಹೋಗುವುದನು, ನಾ-
ಪ್ರತಿದಿನ ಹೋಗುವ ಮಧುಶಾಲಾ?

೧೧೫. ಹಾಲಾಹಲ ನಾ ಕುಡಿದೆನೆಂದು
ತಿಳಿಯದಿರೊ, ಸಿಗದಿರೆ-ಹಾಲಾ,
ಬ್ರಹ್ಮ ಕಪಾಲವನಾನಪ್ಪಿದೆನೀಗ
ಅಪ್ಪಬಹುದಿತ್ತೀಗಲೂ-ನಾ, ಪ್ಯಾಲಾ,
ಬೆಂದ ಹೃದಯವ ಬೇಯಿಸುತಿರುವ
ಸುಂದರ ಮಸಣವ ಕಂಡೆನು ನಾ,
ಅಪ್ಪಿದೆ ನಾನಿದ, ಕಾಲಲಿ ಬಿದ್ದು-
ಹೊರಳಾಡುತಲಿರಲು ಮಧುಶಾಲಾ!

೧೧೬. ಎಸಿತು ಜನಗಳು ತಾವ್ ಬಂದು ಹೋದರು-
ಈ ಮದಿರಾಲಯದಲಿ ಕುಡಿಯಲು ಹಾಲಾ,
ಒಡೆದವೆನಿತೋ ನುಚ್ಚುನೂರಾಗಿ ಇಲ್ಲಿ
ಸುಂದರ ಮಾದಕ ಮಧುಪ್ಯಾಲಾ,
ಎನಿತು ಸಾಕಿಯರಿಲ್ಲಿ ತಮ್ಮ-
ಕೆಲಸವ ಮುಗಿಸಿ ಹೋಗಿಹರೋ,

ಕುಡಿವರೆನಿತು ಜನ ಬಂದರಿಲ್ಲಿ,
ಆದರೂ, ಅದುವೇ ಇದೆ ಈ ಮಧುಶಾಲಾ!

೧೧೭. ಎನಿತು ತುಟಿಗಳನು ತಾನು
ನೆನಪಿಡುವುದು ಮಾದಕ ಹಾಲಾ?
ಎನಿತು ಕೈಗಳನು ತಾನು
ನೆನಪಿಡುವುದೀ ಹುಚ್ಚು ಪ್ಯಾಲಾ?
ಎನಿತು ಮುಖಗಳನು ತಾನು
ನೆನಪಿಡುವಳು ಮುಗ್ಧ ಸಾಕಿ?
ಎನಿತೋ ಕುಡಿವರ ಮಧ್ಯದೊಳಿದೆ
ಒಂದೇ ಒಂದು ಈ ಮಧುಶಾಲಾ?

೧೧೮. ದರದರ ತಿರುಗುತಲಿದ್ದೆನು ನಾನು
ಒದರುತ ಹಾಲಾ! ಹಾಲಾ!
ದೊರೆಯುತಿರಲಿಲ್ಲೀ ಮದಿರಾಲಯ
ದೊರೆಯುತಿರಲಿಲ್ಲೀ ಮಧುಪ್ಯಾಲಾ!
ಮಿಲನವಾದರೂ ಇಂದು, ಮಿಲನ ಸುಖವೇ ಇಲ್ಲ,
ಭಾಗ್ಯದೊಳಿದುವೇ ಬರೆದಿತ್ತೋ?!
ಕುಳಿತೆನು ನಾ ಕಲ್ಲಾಗುತ ಈಗ
ತಿರುಗುತಲಿದೆ ಈ ಮಧುಶಾಲಾ!!

೧೧೯. ನಾ ಮದಿರಾಲಯದಾ ಒಳಗಿಹೆನು
ನನ್ನ ಕೈಯೊಳಿದೆ ಮಧು ಪ್ಯಾಲಾ,
ಪ್ಯಾಲೆಯಲಿ ಮದಿರಾಲಯ ಬಿಂಬಿಸಿ-
ಮೂಡುತಲಿದೆ ಇದು ಹಾಲಾ,
ಈ ಹುಂಬತನದಲೇ ನನ್ನ
ಜೀವನವೆಲ್ಲಾ ಕಳೆದಾಯ್ತು;
ನಾ ಮಧುಶಾಲೆಯ ಒಳಗಿದ್ದೆ,
ನನ್ನೊಳಗಿತ್ತು ಮಧುಶಾಲಾ!

೧೨೦. ಯಾರಿಗಿಲ್ಲ ಕುಡಿವುದರ ನಂಟು?
ಯಾರಿಗೆ ರುಚಿಸದು ಮಧು-ಪ್ಯಾಲಾ?
ಈ ಜಗದಾ ಈ ಮದಿರಾಲಯದಿ
ನಾನಾ ರೂಪದಿ ತುಂಬಿದೆ ಹಾಲಾ!
ತಮ್ಮ ತಮ್ಮ ಮನಕ್ಕೊಗ್ಗುವ ಹಾಗೆ,
ಕಡಿದೆಲ್ಲರೂ ಮತ್ತರಾಗುವರು;
ಎಲ್ಲರಿಗೂ ಒಬ್ಬಳೇ ಮಾದಕ-ಸಾಕಿ,
ಒಂದೇ ಎಲ್ಲರಿಗೂ ಮಧುಶಾಲಾ!

೧೨೧. ನನ್ನ ಅಂತರ್ ಜ್ವಾಲೆಯನು, ಶಾಂತ-
ಗೈವುದೇ ನನ್ನ ಹಾಲಾ?
ಬಿಂಬ-ಪ್ರತಿಬಿಂಬವಾಗಿ ಎಲ್ಲಿ
ಪ್ರತಿಫಲಿಸುವುದೋ, ಅದೇ ನನ್ನ ಹಾಲಾ,
ಮದಿರೆಯ ಮಾರುವ ತಾಣವು ತಾನು
ನನಗಲ್ಲವೋ ಅದು ಮಧುಶಾಲಾ;
ಮತ್ತಿನೊಡನೆ ಮಿಲನವಾಗುವ ತಾಣವೇ-
ಆಗಿರುವುದು ನನ್ನೀ ಮಧುಶಾಲಾ!

೧೨೨. ಮತ್ತು ತರುವ ಹಾಲಾದಿಂದ
ಮತ್ತೆ ನಾ ಕುಡಿದೆನೊ ಈ ಹಾಲಾ,
ಹುಚ್ಚುತನವನು ಕಂಡು ಪ್ಯಾಲೆಯಲಿ,
ನಾ ತ್ಯಜಿಸಿಹೆನೊ ಈ ಪ್ಯಾಲಾ,
ಸಾಕಿಯಕಂಡು, ಸಾಕಿಯಲಿ ಕಂಡು,
ನನ್ನ ತನವನೇ ನಾ ಮರೆತಿಹೆನು!
ಮಧುಶಾಲೆಯ ಮಧುವಿನ ಮಿಲನದಿಂದ
ಮರೆತೆನೊ ನಾ ನೀ ಮಧುಶಾಲಾ!

೧೨೩. ಮದಿರಾಲಯದಾ ಬಾಗಿಲ ಬಡಿವರು
ಹಿಡಿದು ಕೈಯಲಿ ಭಾಗ್ಯದ ಬರಿ ಪ್ಯಾಲಾ,
ಆಳವಾಗಿ, ತಣ್ಣನೆ, ಉಸಿರೆಳೆದೆಳೆದು ಮತ್ತಲಿ
ಹೇಳುತಿರಿದ್ದರಿಂತೀ ಮತವಾಲಾ:
"ಎನಿತು ಅಲ್ಪವೀ ಯೌವನದಾ ಹಾಲಾ!
ಅಯ್ಯೋ, ನಾ ಕುಡಿದೆನಲ್ಲ ತುಂಬುತ ಪ್ಯಾಲಾ!
ಎನಿತು ಬೇಗವಿದು ಮುಚ್ಚಿಹೋಯ್ತು-
ನನ್ನೀ ಜೀವನ ಮಧುಶಾಲಾ!"

೧೨೪. ಎಲ್ಲಿ ಹೋದಳಾ ಸ್ವರ್ಗೀಯ ಸಾಕಿ,
ಎಲ್ಲಿ ಹೋಯಿತು ಸುರಭಿತ ಹಾಲಾ,
ಎಲ್ಲಿ ಹೋಯಿತಾ ಸ್ವಪ್ನಿಲ ಮದಿರಾಲಯ,
ಎಲ್ಲಿ ಹೋಯಿತು ಸ್ವರ್ಣಿಮ ಪ್ಯಾಲಾ,
ಕುಡಿವವರು ಎಂದಾದರೂ ಅಯ್ಯೋ-
ಅರಿತರೇ ಈ ಮದಿರೆಯ ಬೆಲೆಯ?
ಒಡೆಯುತಲೇ ಆ ಮಧುವಿನ ಪ್ಯಾಲಾ,
ಮುರಿದೇ ಬಿದ್ದಿತು ಈ ಮಧುಶಾಲಾ!

೧೨೫. ನಮ್ಮ ಕಾಲದಿ ಅನುಪಮವಾಗಿ
ಕಂಡಿತೆಲ್ಲರಿಗೂ ನಮ್ಮೀ ಹಾಲಾ,
ನಮ್ಮ ಕಾಲದಿ ಅದ್ಭುತವಾಗಿ
ಕಂಡಿತೆಲ್ಲರಿಗೂ ನಮ್ಮೀ ಪ್ಯಾಲಾ,
ಆದರೂ ವೃದ್ಧರ ಕೇಳಲು ನಾನು,
ಇದು ಒಂದೇ ಉತ್ತರ ಬಂತು:
"ಅಂತು ಕುಡಿವರು ಇಲ್ಲ ಯಾರೂ ಈಗ
ಇಲ್ಲವೀಗ ಅಂತಹ ಮಧುಶಾಲಾ!"

೧೨೬. 'ನಾನು'ವನ್ನು ಶುದ್ಧವ ಮಾಡಿದೆ,
ಹೆಸರಾಯಿತು ಅದಕೀಗ 'ಹಾಲಾ'
'ಮೀನ'ಕೆ 'ಮಧುಪಾತ್ರ'ವ ಕೊಟ್ಟೆನು,
'ಸಾಗರ'ಕಾಯಿತು ಹೆಸರು: 'ಪ್ಯಾಲಾ';
ಮೌಲ್ವೀ ಏತಕೆ ಚಕಿತನಾಗುವನು? ಬಿಟ್ಟರು-
ಏತಕೆ-ತಿಲಕ, ತ್ರಿಪುಂಡೀ ಪಂಡಿತರು?
'ನಾ-ಮಹಫಿಲ್ಲ್'ನು ಅಪ್ಪಿಕೊಂಡಿಹೆನು
ನಾನೇ ಮಾಡಿ ಈ ಮಧುಶಾಲಾ!

೧೨೭. ಎನಿತೋ ಮರ್ಮಗಳ ಗಳಿಸಿ, ಪ್ರತಿಸಲ-
ಹೊರಡುವುದೋ-ಬಂದು ಈ ಹಾಲಾ,
ಎನಿತೋ ಮರ್ಮಗಳ ಭೇದವ ತೋರಿಸಿ
ಹೊರಡುವುದೋ-ಬಂದು ಈ ಪ್ಯಾಲಾ,
ಎನಿತು ಅರ್ಥಗಳ ಸಂಕೇತದಿ ತಾನು
ತೋರಿಸಿ ಹೊರಡುವಳೋ ಸಾಕಿ,
ಆದರೂ, ಕುಡಿವವರಿಗೆ ಎಂದೂ
ಬಿಡಿಸದ ಒಗಟೇ ಈ ಮಧುಶಾಲಾ!

೧೨೮. ಮನದ ಆಳದನಿತೇ ಆಳವ
ಹೊಂದಿದೆಯೋ ಈ ಪ್ಯಾಲಾ,
ಮನದ ಮಾದಕತೆ ಎನಿತಿದೆಯೋ
ಅನಿತೇ ಮಾದಕವಿದೆ ಈ ಹಾಲಾ,
ಹೃದಯದ ಭಾವುಕತೆ ಇರುವಷ್ಟೇ
ಸುಂದರವಿರುವಳು ಈ ಸಾಕಿ,
ಎನಿತು ರಸಿಕನೋ ತಾನು, ಅವನಿಗೆ-
ಅನಿತೇ ರಸಮಯವೀ ಮಧುಶಾಲಾ!!

೧೨೯. ಯಾವ ತುಟಿಗಳನೇ ಚುಂಬಿಸಲಿ

ಮತ್ತೇರಿಸುವುದು ನನ್ನೀ ಹಾಲಾ,
ಯಾವ ಕೈಯನೇ ಹಿಡಿಯಲಿ ತಾನು,
ವಿಕ್ಷಿಪ್ತನ ಗೈವುದು ನನ್ನೀ ಹಾಲಾ
ನನ್ನೀ ಸಾಕಿಯ ಕಣ್ಣಲಿ, ಕಣ್ಣಾರದೇ ಕೂಡಲಿ,
ಹುಚ್ಚನಾಗಿ ಕುಣಿವನವನಾರೇ ಇರಲಿ
ಬಂದು ನೋಡಿದರೆನ್ನೀ ಮಧುಶಾಲಾ!!

೧೩೦. ಪ್ರತಿನಾಲಿಗೆ ಮೇಲೂ ನರ್ತಿಸುವುದು
ನನ್ನೀ ಮಾದಕ ಮಧು-ಹಾಲಾ,
ಪ್ರತಿ ಕೈಗಳ ಮೇಲೂ ಕುಳಿತಿರುವುದು
ನನ್ನೀ ಸಾಕಿಯ ಮಧು-ಪ್ಯಾಲಾ,
ಪ್ರತಿಮನೆಯಲು ಇನ್ನು ನಡೆವುದು ಚರ್ಚೆ
ನನ್ನೀ ಮಧು-ವಿಕ್ರೇತನದು;
ಪ್ರತಿ ಅಂಗಳದಲ್ಲೂ ಸುರಭಿತವಾಗಿ
ಮಧು ಸೂಸುವುದೆನ್ನೀ ಮಧುಶಾಲಾ!!

೧೩೧. ನನ್ನೀ ಹಾಲಾದಲ್ಲಿ ಎಲ್ಲರೂ
ಪಡೆದರು ತಮ್ಮದೆ ಹಾಲಾ,
ನನ್ನೀ ಪ್ಯಾಲೆಯಲಿ ಎಲ್ಲರೂ
ಪಡೆದರು ತಮ್ಮದೇ ಪ್ಯಾಲಾ,
ನನ್ನೀ ಸಾಕಿಯಲೇ ಎಲ್ಲರೂ
ಕಂಡರು ತಮ್ಮ ಪ್ರಿಯ ಸಾಕಿಯನು;
ಯಾರಿಗೆ ಎಂತಿತ್ತೋ ಅಂತೇ
ರುಚಿ ತೋರಿಸಿತೆನ್ನೀ ಮಧುಶಾಲಾ!

೧೩೨. ಇವು ಮದಿರಾಲಯದಾ ಕಣ್ಣೀರುಗಳು
ಅಲ್ಲ ಅಲ್ಲ ಇದು ಮಾದಕ-ಹಾಲಾ,
ಇವು ಮದಿರಾಲಯದಾ ಕಣ್ಣುಗಳು
ಅಲ್ಲ ಅಲ್ಲ ಇದು ಮಧು-ಪ್ಯಾಲಾ,
ಯಾವ ಸಮಯದ ಸುಖದ ಸ್ಮೃತಿಯೋ ಇದು
ಸಾಕಿಯಾಗಿ ತಾ ನಾಚುತಲಿಹುದು,
ಅಲ್ಲಅಲ್ಲವಿದು ಕವಿಯ ಹೃದಯಾಂಗಣ
ಇದು ವಿರಹಾಕುಲವೀ ಮಧುಶಾಲಾ!

೧೩೩. ಎನಿತು ಋಷಿಗಳಂತರಂಗದಿಂದಿದು
ಅಯ್ಯೋ, ಬಂದಿದೆಯೋ ಈ ಹಾಲಾ,

ಎನಿತೋ ಆಸೆಗಳನು ಮೆಟ್ಟಿ
ಮಣ್ಣಾಗಿ ಬಂದಿದೆಯೋ ಈ ಪ್ಯಾಲಾ,
ಕುಡಿದವರೆಲ್ಲರು ಹೊರಡುವರಯ್ಯೋ
ಯಾರೂ ಅರಿಯರೀ ರಹಸ್ಯವನು
ಎನಿತು ಮನ-ಮಹಲುಗಳನು ಹೂತು
ಹೊರಬಂದು ನಿಂತಿದೆಯೋ ಈ ಮಧುಶಾಲಾ?

೧೩೪. ವಿಶ್ವವೇ, ನಿನ್ನೀ ವಿಷಮಯ ಜೀವನದಿ
ಸ್ವಲ್ಪವಾದರೂ ನನ್ನೀ ಸಾಕೀಬಾಲಾ
ತಂದು ಕೊಡುವಳೋ, ಕುಡಿಯೋ ನೀ-
ಇದು ಸ್ವಲ್ಪೇ ಇದ್ದರೂ, ನನ್ನದೇ ಹಾಲಾ!
ನಿನ್ನೆಯ ಶೂನ್ಯ ಗಳಿಗೆಗಳೆಲ್ಲಾ
ಸ್ವಲ್ಪಾದರೂ ಇದರಿಂ ರಂಜಿಸಲು
ಜನ್ಮ ಸಫಲವೆನ್ನುವುದು ತಾನು
ಜಗದಲಿ ನನ್ನೀ ಮಧುಶಾಲಾ!

೧೩೫. ಬಹಳ ಒನಪು ಒಯ್ಯಾರಗಳ ತುಂಬಿ
ಸಾಕಿಹೆನೋ ಈ ಸಾಕೀಬಾಲಾ,
ಕಲಿತ ಕಲ್ಪನೆಗಳಿಂದಲೇ ಇವಳು
ಸದಾ ಎತ್ತಿರುವಳೋ ಮಧುಪ್ಯಾಲಾ,
ಪ್ರಿಯಸುತನೊಂದಿಗೆಯೇ ಮಾನವ ಕಾಯೋ
ಕೊಂಡು ನನ್ನೀ ಸುಕುಮಾರಿ ಸಾಕಿಯನು;
ವಿಶ್ವವೇ, ನಿನ್ನ ಕೈಯೊಳಗಿನ್ನು
ಅರ್ಪಿಸುತಿರುವೆನು ಮಧುಶಾಲಾ!

## ಅನುಬಂಧ

೧. ಸ್ವತಃ ಕುಡಿಯುವುದಿಲ್ಲ ನಾನಾದರೂ
ಪರರಿಗೆ ಕುಡಿಸುವೆನೋ ನಾ-ಹಾಲಾ,
ಸ್ವತಃ ಹಿಡಿಯುವುದಿಲ್ಲ ನಾನಾದರೂ
ಪರರಿಗೆ ಹಿಡಿಸುವೆನೋ ನಾ ಪ್ಯಾಲಾ,
ಎಲ್ಲರಿಂ ಕೇಳಿ - ನಾ ಪಡೆದಿಹೆನು
ಬಿತ್ತರಿಸಿಹ ಈ ಉಪದೇಶಗಳ
ಸ್ವತಃ ಹೋಗುವುದಿಲ್ಲ ನಾನಾದರೂ
ಪರರನು ಮುಟ್ಟಿಸುವೆನು ಈ ಮಧುಶಾಲಾ!

೨. ನಾ ಕಾಯಸ್ಥ ಕುಲೋದ್ಭವ, ನನ್ನ
ಪೂರ್ವಜನರೆಲ್ಲರು ಕುಡಿದರೀ ಹಾಲಾ,
ನನ್ನೀ ದೇಹದ ರಕ್ತದಲಿರುವುದು
ಎಪ್ಪತ್ತೈದು ಪ್ರತಿಶತ ಹಾಲಾ,
ವಂಶಪರಂಪರೆಯಿಂದಧಿಕಾರವೆನಗಿದೆ
ಮದಿರಾಲಯದೀ ಅಂಗಳದಿ
ನನ್ನಜ್ಜ-ಮುತ್ತಜ್ಜರ ಕೈಯಿಂದಲೆ
ವಿಕ್ರಯವಾಗಿತ್ತೀ ಮಧುಶಾಲಾ!

೩. ಬಹಳ ಜನರಿಗೆ ನಾಲ್ಕುದಿನ
ತಲೆಗೇರಿ ಇಳಿಯಿತೀ ಹಾಲಾ,
ಬಹಳ ಜನರ ಕೈಯಲೆರಡೇ ದಿನ
ಪಳ ಪಳ ಹೊಳೆಯಿತೀ ಮಧುಪ್ಯಾಲಾ,
ಆದರೂ, ಬೀಳುವುದೀ ಸುರೆಯ ಪ್ರಭಾವ
ಸಮಯದ ಜತೆಗೇ, ಇದರಿಂದಲೇ-
ಇನ್ನೂ ಹಳತಾಗುತ ಆಗುತ
ಇನ್ನೂ ಮತ್ತೇರಿಸುವುದೀ ಮಧುಶಾಲಾ!

೪. ಪಿತೃಪಕ್ಷದಲಿ ಪುತ್ರನೇ ನೀನೆತ್ತು
ಅರ್ಘ್ಯವನಲ್ಲವೋ ಈ ಪ್ಯಾಲಾ,
ಎಲ್ಲಿಯಾದರೂ ಕುಳಿತು ಹೊರಡು ಎಲೆಗಂಗ
ಸಾಗರದಲಿ ತುಂಬಿ ಹಾಲಾ,
ಯಾವುದೇ ತಾಣದ ಮಣ್ಣೇ ತೊಯ್ದರೂ
ತೃಪ್ತಿ ಎನಗಾಗುವುದು,
ತರ್ಪಣ-ಅರ್ಪಣ ಮಾಡೆನಗೆ ನೀ
ಓದಿ ಓದಿ ನೀನೀ ಮಧುಶಾಲಾ!!

# ಸರ್ ಫ್ರಾನ್ಸಿಸ್ ಬೇಕನ್ (೧೫೬೧-೧೬೨೬) : ಪುಟ್ಟ ಪ್ರಬಂಧಗಳು

ಭಾವಾನುವಾದ : ಎ. ಶ್ರೀನಿವಾಸ

## ೧. ಮಾತಾ-ಪಿತೃಗಳು ಮತ್ತು ಮಕ್ಕಳ ಬಗ್ಗೆ

ತಂದೆ-ತಾಯಂದಿರ ಸಂತೋಷಗಳು ಗುಪ್ತವಾದುವು; ಅಂತೆಯೇ ಅವರ ದುಃಖ-ಭೀತಿಗಳು ಕೂಡ. ಅವರ ಸಂತೋಷಗಳು ಮಾತಿಗೆ ಮೀರಿದವು; ಅವರು ತಮ್ಮ ದುಃಖ - ಭೀತಿಗಳನ್ನು ಹೇಳಿಕೊಳ್ಳುವುದೇ ಇಲ್ಲ. ಮಕ್ಕಳಿಂದ ದುಡಿಮೆಯು ಸಂತಸದಾಯಕವೆನಿಸುತ್ತದೆ; ಆದರೆ ಕಷ್ಟಗಳು ಹೆಚ್ಚು ಕಹಿಯೆನಿಸುತ್ತವೆ. ಅವರಿಂದ ಜೀವನದ ಚಿಂತೆಗಳು ಹೆಚ್ಚಾಗುತ್ತವೆ; ಆದರೆ ಸಾವಿನ ನೆನಪು ಕಡಿಮೆಯಾಗುತ್ತದೆ. ಸಂತಾನೋತ್ಪತ್ತಿಯ ಮೂಲಕ ವಂಶಾಭಿವೃದ್ಧಿ ಮನುಷ್ಯನೂ ಸೇರಿದಂತೆ ಎಲ್ಲ ಪಶು-ಪ್ರಾಣಿಗಳಿಗೂ ಸಾಮಾನ್ಯವಾದದ್ದು; ಆದರೆ ಸತ್ಕೀರ್ತಿ, ಸಚ್ಚಾರಿತ್ರ್ಯ ಮತ್ತು ಮಹತ್ಕಾರ್ಯಗಳು ಮನುಷ್ಯನಿಗೆ ಸೇರಿದುವು. ಮಕ್ಕಳಿಲ್ಲದವರು ಅತ್ಯಂತ ದೊಡ್ಡ ಮಹತ್ಕಾರ್ಯಗಳನ್ನೆಸಗಿ ಮಹತ್ಸಾಧನೆಗೆ ಭದ್ರವಾದ ತಳಪಾಯ ಹಾಕಿರುವುದನ್ನು ಕಾಣಬಹುದು; ತಮ್ಮ ದೇಹದ ಮೂರ್ತಿಗಳಾದ ಮಕ್ಕಳಿಲ್ಲದವರು ತಮ್ಮ ಮನಸ್ಸಿನ ಮೂರ್ತಿಗಳನ್ನು ಅಭಿವ್ಯಕ್ತಿಗೊಳಿಸಲು ಹವಣಿಸುತ್ತಾರೆ. ಮುಂದಿನ ಪೀಳಿಗೆಯೇ ಇಲ್ಲದವರಿಗೆ ಮುಂದಿನ ಪೀಳಿಗೆಗಳ ಚಿಂತೆ ಬಲು ಹೆಚ್ಚು. ತಮ್ಮ ಮನೆತನಗಳಿಗೆ ಕೀರ್ತಿತಂದವರು ತಮ್ಮ ಮಕ್ಕಳ ವಿಷಯದಲ್ಲಿ ತುಂಬ ಉದಾರಿಗಳಾಗಿರುತ್ತಾರೆ. ಅವರ ದೃಷ್ಟಿಯಲ್ಲಿ ಮಕ್ಕಳು ತಮ್ಮ ವಂಶದ ನೆಲೆ ಮಾತ್ರವೇ ಅಲ್ಲದೆ ಅವರ ಸಾಧನೆಯ ನೆಲೆಯೂ ಆಗಿದ್ದು, ಅವರು ಮಕ್ಕಳು ಮತ್ತು ಸಾಧನೆಯ ಸಂಕೇತವಾದ ಕೃತಿಗಳು ಎರಡೂ ಆಗಿರುತ್ತಾರೆ.

ತಂದೆ-ತಾಯಿಗಳು ತಮ್ಮ ಹಲವಾರು ಮಕ್ಕಳಿಗೆ ತೋರಿಸುವ ಪ್ರೀತಿ ಎಷ್ಟೋ ವೇಳೆ ಅಸಮಾನವಾಗಿರುತ್ತದೆ; ಕೆಲವೊಮ್ಮೆ ಅದು ಅನುಚಿತವೂ ಆಗಿರುತ್ತದೆ. ಅದರಲ್ಲಿಯೂ ಮುಖ್ಯವಾಗಿ ತಾಯಿಯ ಪ್ರೀತಿ-ಸಾಲೊಮನ್ ಹೇಳುವಂತೆ, ಜಾಣ ಮಗನಿಂದ ತಂದೆಗೆ ಸಂತೋಷ, ಆದರೆ, ಅಯೋಗ್ಯ ಪುತ್ರನಿಂದ ತಾಯಿಗೆ ನಾಚಿಕೆಗೇಡು. ಮನೆ ತುಂಬ ಮಕ್ಕಳಿರುವ ಕುಟುಂಬಗಳಲ್ಲಿ

ಒಂದು ಅಥವಾ ಎರಡು ಹಿರಿಯ ಮಕ್ಕಳಿಗೆ ಗೌರವ ಮತ್ತು ಅತ್ಯಂತ ಕಿರಿಯ ಮಕ್ಕಳಿಗೆ ಅತಿಯಾದ ಮುದ್ದು, ಮಧ್ಯದ ಮಕ್ಕಳನ್ನು ಮರೆತು ಬಿಟ್ಟಂತೆಯೇ ಇರುತ್ತಾರೆ. ಆದರೆ ಎಷ್ಟೋ ವೇಳೆ ಅವರೇ ಅತ್ಯುತ್ತಮವಾದ ಮಕ್ಕಳೆನಿಸುತ್ತಾರೆ. ತಮ್ಮ ಮಕ್ಕಳಿಗೆ ವೆಚ್ಚಕ್ಕಾಗಿ ಹಣ ನೀಡುವ ವಿಷಯದಲ್ಲಿ ತಂದೆ-ತಾಯಿಗಳು ತೋರಿಸುವ ಅನೌದಾರ್ಯ, ಜಿಗುಟುತನ ಒಂದು ಹಾನಿಕಾರಕ ಪ್ರಮಾದ. ಅದರಿಂದ ಮಕ್ಕಳು ಕ್ಷುಲ್ಲಕತನವನ್ನು, ಸಣ್ಣತನವನ್ನು ಬೆಳೆಸಿಕೊಳ್ಳುತ್ತಾರೆ; ಉಪಾಯಗಳನ್ನು ಕುತಂತ್ರಗಳನ್ನು ಕಲಿತುಕೊಳ್ಳುತ್ತಾರೆ; ಹೀನ ಸಹವಾಸದಲ್ಲಿ ಬೀಳುತ್ತಾರೆ; ಕೈತುಂಬ ಹಣ ಬಂದಾಗ ಭೋಗಪ್ರಿಯರೂ, ದುಂದುಗಾರರೂ ಆಗುತ್ತಾರೆ. ಆದ್ದರಿಂದ, ತಂದೆ-ತಾಯಂದಿರು ತಮ್ಮ ಮಕ್ಕಳ ಮೇಲೆ ಹತೋಟಿ ಇಡಬೇಕೇ ಹೊರತು ಅವರ ಕಿಸೆಗಳ ಮೇಲಲ್ಲ. ಅದರಿಂದ, ಅತ್ಯುತ್ತಮ ಫಲಿತಾಂಶ ದೊರಕುತ್ತದೆ. ಜನರು (ತಂದೆ-ತಾಯಂದಿರು, ಶಿಕ್ಷಕರು ಮತಕ್ತು ಸೇವಕರು) ಬಾಲ್ಯದಲ್ಲಿ ಸಹೋದರರ ನಡುವೆ ಪೈಪೋಟಿ ಹುಟ್ಟಿಸಿ, ಸ್ಪರ್ಧಾಮನೋಭಾವವನ್ನು ಬೆಳೆಸುವ ಅವಿವೇಕದ ಮಾರ್ಗವನ್ನು ಅನುಸರಿಸುತ್ತಾರೆ. ಇದರಿಂದ, ಮಕ್ಕಳು ದೊಡ್ಡವರಾದಾಗ ಅವರಲ್ಲಿ ವೈಷಮ್ಯ, ವೈಮನಸ್ಯಗಳು ಬೆಳೆದು ಕುಟುಂಬಗಳ ಸಾಮರಸ್ಯ ಕೆಡುತ್ತದೆ. ಇಟಾಲಿಯನ್ನರು ತಮ್ಮ ಸ್ವಂತ ಮಕ್ಕಳು ಮತ್ತು ಸೋದರರ ಮಕ್ಕಳು ಅಥವಾ ಸಮೀಪ ಬಂಧುಗಳ ನಡುವೆ ಯಾವ ಭೇದವನ್ನೂ ಎಣಿಸುವುದಿಲ್ಲ; ಅವರೆಲ್ಲರೂ ಒಟ್ಟಿಗೆ ಕೂಡಿಬಾಳುವುದಾದರೆ, ಅವರು ತಮ್ಮ ಹೊಟ್ಟೆಯಲ್ಲಿ ಹುಟ್ಟಿದವರಲ್ಲವೆಂಬುದನ್ನು ಮನಸ್ಸಿಗೆ ಹಚ್ಚಿಕೊಳ್ಳುವುದೇ ಇಲ್ಲ. ನಿಜವನ್ನು ಹೇಳಬೇಕೆಂದರೆ, ಪ್ರಕೃತಿಯಲ್ಲಿ ಕೂಡ ಹಾಗೆಯೇ ಇದೆ. ಅದರಿಂದ ಎಷ್ಟೋ ವೇಳೆ ಸೋದರನ ಮಗ ತನ್ನ ಸ್ವಂತ ತಂದೆಯನ್ನೋ, ತಾಯಿಯನ್ನೋ ಹೋಲುವುದಕ್ಕಿಂತಲೂ ಹೆಚ್ಚಾಗಿ ಒಬ್ಬ ಚಿಕ್ಕಪ್ಪನನ್ನೋ, ಓರ್ವ ರಕ್ತಸಂಬಂಧಿಯನ್ನೋ ಹೋಲುತ್ತಿರುತ್ತಾನೆ. ತಂದೆ-ತಾಯಂದಿರು ಸಕಾಲದಲ್ಲಿ ಮಕ್ಕಳು ಇನ್ನೂ ಚಿಕ್ಕವರಾಗಿರುವಾಗಲೇ, ಅವರು ಅವಲಂಬಿಸಬೇಕಾದ ಉದ್ಯೋಗವನ್ನು ಜೀವನೋಪಾಯ ಮಾರ್ಗವನ್ನು ಆಯ್ಕೆಮಾಡಲಿ. ಏಕೆಂದರೆ, ಬಾಲ್ಯದಲ್ಲಿ ಮಕ್ಕಳ ಮನಸ್ಸು ಮೃದುವಾಗಿರುತ್ತದೆ, ಯಾವುದಕ್ಕಾದರೂ ಬಗ್ಗುವಂತ ಹದವಾಗಿರುತ್ತದೆ. ಮಕ್ಕಳು ತಮಗೆ ಯಾವುದರಲ್ಲಿ ಮನಸ್ಸಿದೆಯೋ ಅದರಲ್ಲಿ ಅತ್ಯಂತ ಯಶಸ್ವಿಯಾಗುವುದರಿಂದ, ಮಾತಾಪಿತೃಗಳು ಮಕ್ಕಳ ವಿಷಯದಲ್ಲಿ ತುಂಬ ತಲೆಕೆಡಿಸಿಕೊಳ್ಳುವುದು ಬೇಕಿಲ್ಲ. ಮಕ್ಕಳ ವಿದ್ಯಾಭಿಲಾಷೆ ಅರ್ಹತೆ ಅಥವಾ ಸಾಮರ್ಥ್ಯ ಅಸಾಧಾರಣವಾಗಿದ್ದರೆ ಅದಕ್ಕೆ ಅಡ್ಡ ಬರಬಾರದೆಂಬುದೇನೋ ನಿಜವೇ. ಆದರೆ, ಸಾಮಾನ್ಯವಾಗಿ, "ಅತ್ಯುತ್ತಮವಾದುದನ್ನು ಆರಿಸಿಕೊಳ್ಳಿ, ರೂಢಿಬಲದಿಂದ ಅದು ಪ್ರಿಯವೂ ಸುಲಭವೂ ಆಗುತ್ತದೆ" ಎಂಬುದು ಒಳ್ಳೆಯ ನಿಯಮ. ತಮ್ಮಂದಿರು ಸಾಮಾನ್ಯವಾಗಿ ಅದೃಷ್ಟಶಾಲಿಗಳು, ಆದರೆ, ಅಣ್ಣನ ಆಸ್ತಿಯೇನಾದರೂ ಅವರ ಕೈಗೆ ಸಿಕ್ಕಿದರೆ ಅವರು ಅದೃಷ್ಟಶಾಲಿಗಳಾಗಿ ಉಳಿಯುವುದು ಅಪರೂಪ, ಇಲ್ಲವೇ ಇಲ್ಲವೆಂದರೂ ಸರಿಯೆ.

(ಮೂಲ ಪ್ರಬಂಧ : "of Parents and Children")

## ೨. ಮದುವೆ ಮತ್ತು ಒಂಟಿ ಜೀವನ

ಮಡದಿ ಮತ್ತು ಮಕ್ಕಳಿರುವಾತ ಅದೃಷ್ಟಕ್ಕೆ ಒತ್ತೆಯಾಳುಗಳನ್ನು ಕೊಟ್ಟಿದ್ದಾನೆ; ಹೆಂಡತಿ

ಮತ್ತು ಮಕ್ಕಳನ್ನು ಕಾಪಾಡುವ ಹೊಣೆಯನ್ನು ಹೊತ್ತಿರುವ ಆತ ದೊಡ್ಡ ಸಾಹಸ ಕಾರ್ಯಗಳಿಗೆ - ಅವು ಒಳ್ಳೆಯವೇ ಇರಲಿ, ಕೆಟ್ಟವೇ ಇರಲಿ - ಕೈ ಹಾಕಲು ಅವರು ಅಡ್ಡಿಯಾಗುತ್ತಾರೆ. ನಿಜವಾಗಿ, ಸಾರ್ವಜನಿಕರಿಗೆ ಅತ್ಯುಪಯುಕ್ತವಾದ ಅತ್ಯುತ್ತಮ ಕಾರ್ಯಗಳು ಅವಿವಾಹಿತರಿಂದಲೇ ಅಥವಾ ಮಕ್ಕಳಿಲ್ಲದ ಪುರುಷರಿಂದಲೇ ಆಗಿವೆ; ಅವರು ಸಾರ್ವಜನಿಕರನ್ನೇ ತಮ್ಮ ಕುಟುಂಬವೆಂದು ಪರಿಗಣಿಸಿ, ತಮ್ಮ ವಾತ್ಸಲ್ಯವನ್ನೂ ಸಂಪತ್ತನ್ನೂ ಅವರಿಗೆ ಧಾರೆಯೆರೆದಿದ್ದಾರೆ. ಆದಾಗ್ಯೂ, ಮಕ್ಕಳಿರುವವರು ಭವಿಷ್ಯತ್ಕಾಲದ ಬಗ್ಗೆ ಅತಿ ಹೆಚ್ಚು ವ್ಯಾಕುಲತೆ, ಆತಂಕ ಹೊಂದಿರಬೇಕಾದುದ್ದು ಅತ್ಯಂತ ನ್ಯಾಯಸಮ್ಮತ, ಸ್ವಾಭಾವಿಕ. ಏಕೆಂದರೆ, ಅವರು ತಮಗೆ ಅತ್ಯಂತ ಪ್ರಿಯರಾದವರನ್ನು ಭವಿಷ್ಯದ ಮಡಿಲಿಗೆ ಹಾಕಬೇಕೆಂಬುದನ್ನು ಬಲ್ಲರು. ಕೆಲವರಿದ್ದಾರೆ, ಅವರು ಒಂಟಿ ಜೀವನ ನಡೆಸುತ್ತಿದ್ದರೂ, ಅವರ ಚಿಂತನೆ, ಆಲೋಚನೆಗಳು ಅವರೊಂದಿಗೇ ಮುಕ್ತಾಯಗೊಳ್ಳುತ್ತಿದ್ದು, ಮರಣಾನಂತರ ತಮ್ಮ ಹೆಸರು ಉಳಿಯಬೇಕೆಂಬ ಚಿಂತೆಯಿಲ್ಲದೆ, ಅವರು ಭವಿಷ್ಯದ ಬಗ್ಗೆ ಉದಾಸೀನರಾಗಿರುತ್ತಾರೆ. ಅಷ್ಟೇಕೆ, ಮತ್ತೆ ಕೆಲವರು ತಮ್ಮ ಹೆಂಡತಿ ಮತ್ತು ಮಕ್ಕಳನ್ನು ಖರ್ಚಿನ ಬಾಬತ್ತುಗಳೆಂದು ಪರಿಗಣಿಸುತ್ತಾರೆ. ಅದಕ್ಕಿಂತಲೂ ಮಿಗಿಲಾಗಿ, ಕೆಲವರು ಅವಿವೇಕಿ, ಶ್ರೀಮಂತ, ದುರಾಶೆಯ ವ್ಯಕ್ತಿಗಳು ತಮಗೆ ಮಕ್ಕಳಿಲ್ಲವೆಂದು ಹೆಮ್ಮೆ ಪಡುತ್ತಾರೆ - ಜನರು ತಮ್ಮನ್ನು ಅಷ್ಟರ ಮಟ್ಟಿಗೆ ಹೆಚ್ಚು ಶ್ರೀಮಂತರೆಂದು ತಿಳಿಯಲೆಂದು. ಬಹುಶಃ, ಅವರು ಜನರು ಆಡಿಕೊಳ್ಳುವುದನ್ನು ಕೇಳಿರುತ್ತಾರೆ. ಒಬ್ಬ ಆ ವ್ಯಕ್ತಿ ಭಾರಿ ಶ್ರೀಮಂತ ಎಂದರೆ ಮತ್ತೊಮ್ಮೆ ಆ ಮಾತಿಗೆ ಆಕ್ಷೇಪಿಸಿ, ನಿಜ, ಆದರೆ, ಆತನಿಗೆ ಮಕ್ಕಳ ದೊಡ್ಡ ಜವಾಬ್ದಾರಿ ಇದೆ ಎನ್ನುತ್ತಾನೆ, ಮಕ್ಕಳಿರುವುದರಿಂದ ಆತನ ಆಸ್ತಿ ಕಡಿಮೆಯಾಯಿತೇನೋ ಎಂಬಂತೆ. ಒಂಟಿ ಜೀವನದ ಸರ್ವಸಾಮಾನ್ಯ ಸಮರ್ಥನೆ ಎಂದರೆ ಸ್ವಾತಂತ್ರ್ಯ. ಅದರಲ್ಲಿಯೂ ವಿಶೇಷವಾಗಿ, ಕೆಲವರು ಆತ್ಮತೃಪ್ತ, ಚಪಲಚಿತ್ತವ್ಯಕ್ತಿಗಳು ಸ್ವಾತಂತ್ರ್ಯದ ವಿಷಯದಲ್ಲಿ ಎಂತಹ ಸೂಕ್ಷ್ಮ ಭಾವನೆಯನ್ನಿಟ್ಟುಕೊಂಡಿರುತ್ತಾರೆಂದರೆ, ಅವರು ಯಾವೊಂದು ಅಡ್ಡಿ - ಅಡಚಣೆಯನ್ನು ಸಹಿಸಲಾರದವರಾಗಿ, ತಾವು ಬಳಸುವ ನಡುಪಟ್ಟಿ ಮತ್ತು ಕಾಲುಚೀಲ ಕಟ್ಟುವ ಲಾಡಿಗಳನ್ನು ಕೂಡ ಬೇಡಿ-ಸಂಕೋಲೆಗಳೆಂದು ತಿಳಿಯುವಂತಹವರಾಗಿರುತ್ತಾರೆ. ಅವಿವಾಹಿತ ಪುರುಷರು ಅತ್ಯುತ್ತಮ ಸ್ನೇಹಿತರು, ಅತ್ಯುತ್ತಮ ಒಡೆಯರು, ಅತ್ಯುತ್ತಮ ಸೇವಕರು, ಆದರೆ ಯಾವಾಗಲೂ ಅತ್ಯುತ್ತಮ ಪ್ರಜೆಗಳಲ್ಲ. ಏಕೆಂದರೆ, ಅವರಿಗೆ ಯಾವ ಭಾರವೂ ಇಲ್ಲದ್ದರಿಂದ ಅವರು ಸುಲಭವಾಗಿ ಓಡಿ ಹೋಗಬಲ್ಲರು; ದೇಶವನ್ನು ಬಿಟ್ಟು ಓಡಿಹೋಗುವವರೆಲ್ಲರೂ ಬಹುಮಟ್ಟಿಗೆ ಅವಿವಾಹಿತರೇ. ಒಂಟಿ ಜೀವನ ಕ್ರೈಸ್ತಪಾದ್ರಿಗಳಿಗೆ ಸರಿಹೊಂದುತ್ತದೆ. ಏಕೆಂದರೆ ಒಂದು ಮಡುವಿನಲ್ಲಿ ನಿಂತ ನೀರಾಗಿರುವ ಅನುಕಂಪವು ವಿಶಾಲವಾಗಿ ಹರಡಲಾರದು. ನ್ಯಾಯಾಧೀಶರು ಮತ್ತು ದಂಡಾಧಿಕಾರಿಗಳಿಗೆ ಈ ವಿಷಯ ಮಹತ್ವದ್ದಲ್ಲ. ಏಕೆಂದರೆ, ಅವರು ದಾಕ್ಷಿಣ್ಯಪರರೂ, ಭ್ರಷ್ಟರೂ ಆಗಿದ್ದರೆ, ಅವರ ಸೇವಕನು ಹೆಂಡತಿಗಿಂತ ಐದು ಪಟ್ಟು ಹೆಚ್ಚು ಕೆಟ್ಟವನಾಗಿರುತ್ತಾನೆ, ಭ್ರಷ್ಟನಾಗಿರುತ್ತಾನೆ. ಸೈನಿಕರ ವಿಷಯದಲ್ಲಿಯಾದರೋ, ಸೇನಾಧಿಪತಿಗಳು ರಣರಂಗದಲ್ಲಿ ಸೈನಿಕರನ್ನು ಹುರಿದುಂಬಿಸುವಾಗ ಸಾಮಾನ್ಯವಾಗಿ ಅವರ ಹೆಂಡಿರು ಮತ್ತು ಮಕ್ಕಳ ನೆನಪು ಮಾಡಿಕೊಡುತ್ತಾರೆ. ತುರ್ಕಿದೇಶದವರು ಮದುವೆಯನ್ನು ತೆಗಳುವುದರಿಂದ, ಸಾಮಾನ್ಯ ಸೈನಿಕರಲ್ಲಿ ಕರ್ತವ್ಯ ನಿಷ್ಠೆ ಕಡಿಮೆಯಾಗುವಂತೆ ತೋರುತ್ತದೆ. ನಿಜವಾಗಿಯೂ, ಮಾನವೀಯತೆಯ

ನೀತಿಶಿಕ್ಷಣನೀಡುವ ಹೆಂಡತಿ ಮತ್ತು ಮಕ್ಕಳು ಪುರುಷರನ್ನು ಕರುಣಾಳುಗಳಾಗುವಂತೆ ಮಾಡುತ್ತಾರೆ. ಒಂಟಿಯಾಗಿರುವವರು ಹೆಚ್ಚು ಉದಾರಿಗಳಾಗಿರಬಹುದಾದರೂ, ಮತ್ತೊಂದೆಡೆ, ಅವರು ಹೆಚ್ಚು ಕ್ರೂರಿಗಳೂ, ಕಲ್ಲೆದೆಯವರೂ ಆಗಿರುವುದರಿಂದ, ಕಠಿಣ ತನಿಖಾಧಿಕಾರಿಗಳಾಗಲು ಯೋಗ್ಯರು. ಏಕೆಂದರೆ, ಅವರಿಗೆ ಮೃದುಹೃದಯಿಗಳಾಗಲು ಅವಕಾಶಗಳು ದೊರೆಯುವುದು ಅಪರೂಪ. ಗಂಭೀರ ಸ್ವಭಾವದವರೂ, ಸಂಪ್ರದಾಯ ನಿಷ್ಠರೂ, ತತ್ಫಲವಾಗಿ, ಸಮಚಿತ್ತರೂ ಆದ ವ್ಯಕ್ತಿಗಳು ಸಾಮಾನ್ಯವಾಗಿ ಉತ್ತಮ ಗಂಡಂದಿರಾಗುತ್ತಾರೆ; ಕಾಲಿಪ್ಸೊ ದೇವತೆಯನ್ನು ಮದುವೆಯಾಗಿ ಅಮರತ್ವವನ್ನು ಪಡೆಯಲು ನಿರಾಕರಿಸಿ, ತನ್ನ ವೃದ್ಧ ಪತ್ನಿಯೇ ತನಗೆ ಸಾಕೆಂದು ಹಿಂದಿರುಗಿದ, ಯುಲಿಸಿಸ್. ಎಷ್ಟೋ ವೇಳೆ ಪರಿಶುದ್ಧ ಮಹಿಳೆಯರು ತಮ್ಮ ನೈತಿಕ ಪರಿಶುದ್ಧತೆಯನ್ನೇ ಮುಂದುಮಾಡಿಕೊಂಡು, ಜಂಭಗಾತಿಯರೂ, ಹಠಮಾರಿಗಳೂ ಆಗಿರುವುದುಂಟು. ಪತ್ನಿಯೂ ತನ್ನ ಪತಿ ವಿವೇಕಿ ಎಂದು ತಿಳಿಯುವಂತಾದರೆ, ಆಕೆಯು ಪರಿಶುದ್ಧಳೂ, ವಿಧೇಯಳೂ ಆಗಿರುತ್ತಾಳೆ. ಇದೇ ಅತ್ಯುತ್ತಮವಾದ ಭರವಸೆ. ಗಂಡ ತನ್ನ ಶೀಲವನ್ನು ಶಂಕಿಸುವುದನ್ನು ಕಂಡರೆ ಆಕೆ ಆತನನ್ನು ಎಂದೂ ವಿವೇಕಿಯೆಂದು ಪರಿಗಣಿಸುವುದಿಲ್ಲ. ಪತ್ನಿಯರು ಯುವಕರ ನಲ್ಲೆಯರು; ಮಧ್ಯವಯಸ್ಕರ ಸಂಗಾತಿಗಳು; ಮತ್ತು ವೃದ್ಧ ದಾದಿಯರು. ಆದ್ದರಿಂದ ಒಬ್ಬಾನೊಬ್ಬ ಮನುಷ್ಯನಿಗೆ ತನಗೆ ಇಷ್ಟಬಂದಾಗ ಮದುವೆಯಾಗಲು ಒಂದಲ್ಲ ಒಂದು ಕಾರಣ ಇದ್ದೇ ಇರುತ್ತದೆ. ಆದಾಗ್ಯೂ, ಜ್ಞಾನಿಗಳಲ್ಲೊಬ್ಬನೆಂದು ಪ್ರಸಿದ್ಧನಾದ ವ್ಯಕ್ತಿಯೊಬ್ಬ (ಐಯೋನಿಕ್ ತತ್ವಜ್ಞಾನಿ ಥೇಲ್ಸ್) ಈ ಪ್ರಶ್ನೆಗೆ - ಒಬ್ಬ ಮನುಷ್ಯ ಯಾವಾಗ ಮದುವೆಯಾಗಬೇಕು?-ಎಂಬ ಪ್ರಶ್ನೆಗೆ - ಉತ್ತರ ನೀಡಿದ: ಯುವಕನಿಗೆ ಈಗಲೇ ಬೇಡ, ವಯಸ್ಸಾದವನಿಗೆ ಬೇಡವೇ ಬೇಡ. ಕೆಟ್ಟ ಗಂಡಂದಿರಿಗೆ ತುಂಬ ಒಳ್ಳೆಯ ಹೆಂಡತಿಯರಿರುವುದನ್ನು ಹಲವು ಬಾರಿ ಕಾಣಬಹುದು. ಇದಕ್ಕೆ ಕಾರಣ, ಪತ್ನಿಯ ಒಳ್ಳೆಯ ತನದಿಂದ ಗಂಡನ ಪ್ರೀತಿ ಒಂದಲ್ಲ ಒಂದು ದಿನ ಆಕೆಯಲ್ಲಿ ನೆಲೆಗೊಂಡಾಗ ಅದರ ಬೆಲೆ ಹೆಚ್ಚಾಗುತ್ತದೆ ಎಂಬುದಾಗಿರಬಹುದು; ಅಥವಾ ಪತ್ನಿಯರು ತಮ್ಮ ತಾಳ್ಮೆಯ ಬಗ್ಗೆ ಹೆಮ್ಮೆಪಟ್ಟುಕೊಳ್ಳುತ್ತಾರೆ ಎಂಬುದಾಗಿರಬಹುದು. ಆದರೆ, ಇದೊಂದು ಮಾತು ಎಂದೂ ಸುಳ್ಳಾಗುವುದಿಲ್ಲ: ಪತ್ನಿಯರು ತಮ್ಮ ಸ್ನೇಹಿತರ ಇಷ್ಟಕ್ಕೆ ವಿರುದ್ಧವಾಗಿ, ತಮ್ಮ ಸ್ವಂತ ಇಚ್ಛೆಯಿಂದಲೇ ಕೆಟ್ಟ ಗಂಡಂದಿರನ್ನು ಆಯ್ಕೆಮಾಡಿದ್ದರೆ, ಅವರು ತಮ್ಮ ಸ್ವಂತ ಅವಿವೇಕವನ್ನೇ ಸಮರ್ಥಿಸಿಕೊಳ್ಳುತ್ತಾರೆ.

(ಮೂಲ ಪ್ರಬಂಧ : of Marriage and Single Life")

## ಪ್ರವಾಸವನ್ನು ಕುರಿತು

ಪ್ರವಾಸದಿಂದ ಕಿರಿಯರಿಗೆ ಶಿಕ್ಷಣ; ಹಿರಿಯರಿಗೆ ಅನುಭವ. ತಾನು ಹೋಗುವ ದೇಶದ ಭಾಷೆಯ ಅಷ್ಟಿಷ್ಟು ಪರಿಚಯವಿಲ್ಲದೆ ಪ್ರವಾಸ ಹೊರಡುವವನು ಆ ದೇಶದ ಭಾಷೆಯನ್ನು ಕಲಿಯಲು ಹೋಗುವವನೇ ಹೊರತು ಸಂಚಾರಕ್ಕೆ ಹೋಗುವವನಲ್ಲ. ತರುಣರು ಖಾಸಗಿ ಶಿಕ್ಷಕ ಇಲ್ಲವೇ ವಿಶ್ವಾಸಾರ್ಹರಾದ ಸೇವಕನ ಮಾರ್ಗದರ್ಶನದಲ್ಲಿ ಪ್ರವಾಸ ಮಾಡುವುದನ್ನು ನಾನು ಒಪ್ಪುತ್ತೇನೆ. ಆತನು ಆ ದೇಶದ ಭಾಷೆಯನ್ನು ಬಲ್ಲವನಾಗಿದ್ದು, ಹಿಂದೆ ಆ ದೇಶಕ್ಕೆ ಭೇಟಿಕೊಟ್ಟವನಾಗಿದ್ದರೆ, ಅವರಿಗೆ ತಾವು ಹೋಗುವ ದೇಶದಲ್ಲಿ ನೋಡಬೇಕಾದಂತಹವು ಏನೇನಿವೆ; ಯಾವ ವ್ಯಕ್ತಿಗಳನ್ನು

ಪರಿಚಯಮಾಡಿಕೊಳ್ಳಬೇಕು; ಅಲ್ಲಿ ಕಲಿಯಬೇಕಾದದ್ದು ಏನಿದೆ ಎಂಬುದನ್ನು ತಿಳಿಸಿಕೊಡಬಲ್ಲ. ಹಾಗಲ್ಲದಿದ್ದರೆ, ತರುಣರು ಕಣ್ಣು ಕಟ್ಟಿಕೊಂಡು ಪರದೇಶಗಳಲ್ಲಿ ಏನನ್ನೂ ನೋಡಲಾರದವರಾಗುತ್ತಾರೆ. ಆಶ್ಚರ್ಯದ ಸಂಗತಿ ಎಂದರೆ, ಸಮುದ್ರಯಾನದಲ್ಲಿ ಆಕಾಶ ಮತ್ತು ಸಮುದ್ರವನ್ನು ಬಿಟ್ಟರೆ ನೋಡುವಂಥದೇನೂ ಇಲ್ಲದಿದ್ದರೂ ಜನರು ದಿನಚರಿಗಳನ್ನು ಬರೆದಿಡುತ್ತಾರೆ. ಆದರೆ, ಭೂ ಪ್ರವಾಸದಲ್ಲಿ ಗಮನಿಸಬೇಕಾದದ್ದು ಬೇಕಾದಷ್ಟಿದ್ದರೂ ಜನರು ಬಹಳಷ್ಟನ್ನು ದಾಖಲಿಸುವುದೇ ಇಲ್ಲ - ಕಡಲಯಾನದ ಆಕಸ್ಮಿಕಗಳೇ ಗಮನಿಸಬೇಕಾದ ಸಂಗತಿಗಳಿಗಿಂತಲೂ ಬರೆದಿಡಲು ಹೆಚ್ಚು ಸೂಕ್ತವೆಂಬಂತೆ. ಆದ್ದರಿಂದ, ದಿನಚರಿಗಳನ್ನು ಬಳಕೆಗೆ ತರಬೇಕು. ಪ್ರವಾಸದಲ್ಲಿ ನೋಡಿ, ಗಮನಿಸಬೇಕಾದುವುಗಳೆಂದರೆ: ರಾಜರ ಆಸ್ಥಾನಗಳು, ಅದರಲ್ಲಿಯೂ ವಿಶೇಷವಾಗಿ ದೊರೆಗಳು ರಾಯಭಾರಿಗಳಿಗೆ ಸಂದರ್ಶನ ನೀಡುವ ಸಂದರ್ಭಗಳಲ್ಲಿ; ಮೊಕದ್ದಮೆಗಳ ವಿಚಾರಣೆ ನಡೆಸುತ್ತಿರುವಾಗ ನ್ಯಾಯಾಲಯಗಳು, ಅಂತೆಯೇ ಧಾರ್ಮಿಕ ನ್ಯಾಯಮಂಡಲಿಗಳು; ಇಗರ್ಜಿಗಳು ಮತ್ತು ಮಠಗಳು ಅವುಗಳಲ್ಲಿ ಇನ್ನೂ ಉಳಿದಿರುವ ಸ್ಮಾರಕಗಳು; ನಗರಗಳ ಮತ್ತು ಪಟ್ಟಣಗಳ ಕೋಟೆ - ಕೊತ್ತಲಗಳು, ಅಂತೆಯೇ ರೇವುಗಳು ಮತ್ತು ಬಂದರುಗಳು; ಪ್ರಾಚೀನ ಅವಶೇಷಗಳು; ಗ್ರಂಥಾಲಯಗಳು; ಮಹಾವಿದ್ಯಾಲಯಗಳು, ವಾಗ್ವಾದಗಳು, ಚರ್ಚಾಗೋಷ್ಠಿಗಳು, ಉಪನ್ಯಾಸಗಳು ನಡೆಯುವ ಸ್ಥಳಗಳು; ಹಡಗುಗಳು ಮತ್ತು ಯುದ್ಧನೌಕೆಗಳು; ಮಹಾನಗರಗಳ ಸಮೀಪವಿರುವ ಸರ್ಕಾರಿಭವನಗಳು, ಉದ್ಯಾನವನಗಳು, ವಿಹಾರ ಕೇಂದ್ರಗಳು; ಶಸ್ತ್ರಾಗಾರಗಳು ಮತ್ತು ಮದ್ದಿನ ಮನೆಗಳು; ಸ್ಫೋಟಕಪ್ರವ್ಯಗಳ ಉಗ್ರಾಣ; ವಿನಿಮಯ ಕೇಂದ್ರಗಳು ; ವರ್ತಕ ಸಂಘಗಳು; ಉಗ್ರಾಣಗಳು; ಕುದುರೆಸವಾರಿ ಕಸರತ್ತುಗಳು; ಕತ್ತಿವರಸೆ; ಸೈನಿಕರ ತರಪೇತು ಮುಂತಾದುವು; ಉತ್ತಮ ವರ್ಗದ ಜನರು ನೋಡುವಂತಹ ಹರ್ಷಾಂತನಾಟಕಗಳು; ವಸ್ತ್ರಾಭರಣಗಳ ಸಂಗ್ರಹಾಲಯಗಳು; ವಿವಿಧ ವಸ್ತು ಸಂಗ್ರಹ ಶಾಲೆಗಳು ಮತ್ತು ಚಿತ್ರಶಾಲೆಗಳು; ಒಟ್ಟಿನಲ್ಲಿ, ಅವರು ಭೇಟಿ ನೀಡುವ ಸ್ಥಳಗಳಲ್ಲಿ ಸ್ಮರಣೀಯವಾದದ್ದು ಏನೇನಿದೆಯೋ ಅದೆಲ್ಲವೂ ನೋಡತಕ್ಕದ್ದು. ಅವೆಲ್ಲವುಗಳ ಬಗ್ಗೆ ಖಾಸಗಿ ಶಿಕ್ಷಕರು ಅಥವಾ ಸೇವಕರು ಪರಿಶ್ರಮಪೂರ್ವಕ ವಿಚಾರಣೆ ನಡೆಸಬೇಕು. ಮೆರವಣಿಗೆಗಳು, ಸಾರ್ವಜನಿಕ ಪ್ರದರ್ಶನಗಳು, ಹಬ್ಬಗಳು, ಮದುವೆಗಳು, ಶವಸಂಸ್ಕಾರಗಳು, ಮರಣದಂಡನೆಗಳು ಇಂತಹವುಗಳನ್ನು ನೋಡುವಂತೆ ವಿಶೇಷವಾಗಿ ಒತ್ತಾಯ ಪಡಿಸುವ ಅಗತ್ಯವಿಲ್ಲವಾದಾಗ್ಯೂ, ಅವುಗಳನ್ನೂ ಕಡೆಗಾಣಿಸುವಂತಿಲ್ಲ. ಒಬ್ಬಾನೊಬ್ಬ ತರುಣನು ತನ್ನ ಪ್ರವಾಸದ ಅವಧಿಯನ್ನು ಕಡಿಮೆಮಾಡಿ, ಅಲ್ಪಾವಧಿಯಲ್ಲಿ ಹೆಚ್ಚು ಮಾಹಿತಿ ಮತ್ತು ಅನುಭವಗಳನ್ನು ಗಳಿಸಿಕೊಳ್ಳುವಂತಾಗಬೇಕಾದರೆ ಹೀಗೆ ಮಾಡಬೇಕು. ಮೊದಲನೆಯದಾಗಿ, ಆಗಲೇ ಹೇಳಿದಂತೆ, ಆತ ಹೊರಡುವುದಕ್ಕಿಂತ ಮುಂಚೆ ಅಷ್ಟಿಷ್ಟು ಭಾಷಾ ಪರಿಚಯವನ್ನು ಪಡೆದಿರಬೇಕು. ನಂತರ, ಈಗಾಗಲೇ ಹೇಳಿದಂತೆ, ಆತನೊಂದಿಗೆ ದೇಶವನ್ನು ಬಲ್ಲಂತಹ ಓರ್ವಸೇವಕ ಅಥವಾ ಖಾಸಗಿ ಶಿಕ್ಷಕ ಇರಬೇಕು. ಆತ ತನ್ನೊಂದಿಗೆ ತಾನು ಸಂಚರಿಸುವ ದೇಶದ ವಿವರಣೆ ನೀಡುವ ಯಾವುದಾದರೊಂದು ಪುಸ್ತಕವನ್ನೋ, ನಕ್ಷೆಯನ್ನೋ ತೆಗೆದುಕೊಂಡು ಹೋಗಲಿ. ಇದರಿಂದ ಆತ ನಡೆಸುವ ವಿಚಾರಣೆ ತುಂಬ ಅರ್ಥಪೂರ್ಣವಾಗುತ್ತದೆ. ಆತ ಒಂದು ದಿನಚರಿಯನ್ನು ಇಟ್ಟುಕೊಳ್ಳಲಿ. ಆತ ಯಾವೊಂದು ನಗರ ಅಥವಾ ಪಟ್ಟಣದಲ್ಲಿ, ಆ ಸ್ಥಳದ ವೀಕ್ಷಣೆಗೆ ಎಷ್ಟು ಕಾಲ ಬೇಕೋ ಅಷ್ಟು ಕಾಲವಲ್ಲದೆ, ಹೆಚ್ಚು ತಂಗುವುದು ಬೇಡ. ಅಷ್ಟೇ

ಅಲ್ಲ. ಒಂದಾನೊಂದು ನಗರ ಅಥವಾ ಪಟ್ಟಣದಲ್ಲಿ ತಂಗಿದಾಗ, ಆತ ತನ್ನ ಬಿಡಾರವನ್ನು ನಗರದ ಒಂದು ಕೊನೆಯಿಂದ, ಭಾಗದಿಂದ, ಮತ್ತೊಂದು ಕೊನೆಗೆ, ಭಾಗಕ್ಕೆ ಬದಲಾಯಿಸಲಿ. ಇದು ಪರಿಚಿತರನ್ನು ಆಕರ್ಷಿಸುವ ಸೂಜಿಗಲ್ಲು. ಇದರಿಂದ, ಹಲವಾರು ಮಿತ್ರರನ್ನು ಗಳಿಸಿಕೊಳ್ಳಬಹುದು. ಆತ ತನ್ನ ದೇಶೀಯರ ಸಹವಾಸದಿಂದ ದೂರ ಉಳಿದು, ತಾನು ಪ್ರವಾಸ ಮಾಡುತ್ತಿರುವ ರಾಷ್ಟ್ರದ ಉತ್ತಮ ಜನರ ಸಹವಾಸದಲ್ಲಿ ಭೋಜನ ಮಾಡಲಿ. ಆತ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬಿಡಾರವನ್ನು ಬದಲಿಸುವಾಗ, ತಾನು ಹೋಗುತ್ತಿರುವ ಸ್ಥಳದ ಯಾವನಾದರೊಬ್ಬ ಉನ್ನತ ವ್ಯಕ್ತಿಗೆ ಶಿಫಾರಸು ಪತ್ರವನ್ನು ಪಡೆದುಕೊಳ್ಳಲಿ. ಆ ವ್ಯಕ್ತಿಯ ಪ್ರಭಾವವನ್ನು ತಾನು ನೋಡಬೇಕಾದದ್ದನ್ನು ನೋಡಲು, ತಿಳಿಯಬೇಕಾದದ್ದನ್ನು ತಿಳಿಯಲು ಬಳಸಿಕೊಳ್ಳಬಹುದು. ಇದರಿಂದ, ಆತ ತನ್ನ ಪ್ರವಾಸವನ್ನು ಲಾಭದಾಯಕವಾಗಿ ಮೊಟಕುಗೊಳಿಸಬಹುದು. ಪ್ರವಾಸದಲ್ಲಿ ಗಳಿಸಿಕೊಳ್ಳಬೇಕಾದ ವ್ಯಕ್ತಿ ಪರಿಚಯದ ಬಗ್ಗೆ ಹೇಳುವುದಾದರೆ, ರಾಯಭಾರಿಗಳ, ಕಾರ್ಯದರ್ಶಿಗಳ ಮತ್ತು ಪರಿವಾರದ ಪರಿಚಯವು ಅತ್ಯಂತ ಲಾಭದಾಯಕವಾದದ್ದು. ಏಕೆಂದರೆ, ಹಲವಾರು ದೇಶಗಳ ಅನುಭವವನ್ನು ಗಳಿಸಿಕೊಂಡಿರುವವರೊಂದಿಗೆ ಸಂಭಾಷಣೆಯಲ್ಲಿ ತೊಡಗುವುದರಿಂದ, ಆತ ಒಂದು ದೇಶದ ಸಂಚಾರದಲ್ಲಿ ಹಲವಾರು ದೇಶಗಳ ಅನುಭವವನ್ನು ತನ್ನದಾಗಿಸಿಕೊಳ್ಳಬಹುದು. ವಿದೇಶಗಳಲ್ಲಿ ಖ್ಯಾತಿ ಗಳಿಸಿರುವ ಎಲ್ಲ ಬಗೆಗಳ ಘನ ವ್ಯಕ್ತಿಗಳನ್ನು ಆತ ಕಂಡು, ಭೇಟಿ ಮಾಡಿ, ಅವರ ವಾಸ್ತವಿಕ ಜೀವನವು ಅವರ ಖ್ಯಾತಿಗೆ ತಕ್ಕುದಾಗಿದೆಯೇ ಎಂಬುದನ್ನು ತಿಳಿಸಬಲ್ಲವನಾಗಲಿ. ಜಗಳಗಳ ಬಗ್ಗೆ: ಎಚ್ಚರಿಕೆ ಮತ್ತು ವಿವೇಚನೆಯಿಂದ ದೂರ ಉಳಿಯಬೇಕು. ಸಾಮಾನ್ಯವಾಗಿ, ಜಗಳಗಳು ಉಂಟಾಗುವುದು ನಲ್ಲೆಯರಿಗಾಗಿ, ಮದ್ಯಪಾನದಿಂದಾಗಿ, ಸ್ಥಾನಕ್ಕಾಗಿ ಮತ್ತು ಚುಚ್ಚು ಮಾತುಗಳಿಂದಾಗಿ. ಮುಂಗೋಪಿಗಳೂ, ಜಗಳಗಂಟರೂ ಆದ ವ್ಯಕ್ತಿಗಳ ಜೊತೆಯಲ್ಲಿ ಎಚ್ಚರಿಕೆಯಿಂದ ನಡೆದುಕೊಳ್ಳಬೇಕು. ಏಕೆಂದರೆ, ಅವರು ತಮ್ಮ ಜಗಳಗಳಲ್ಲಿ ನಮ್ಮನ್ನು ಪೇಚಾಟಕ್ಕೆ ಸಿಕ್ಕಿಸಿಬಿಡುತ್ತಾರೆ. ಪ್ರವಾಸಿಯು ಸ್ವದೇಶಕ್ಕೆ ಮರಳಿ ಬಂದ ಮೇಲೆ ತಾನು ಪ್ರವಾಸ ಮಾಡಿದ ದೇಶದ ಸಂಪರ್ಕವನ್ನು ಸಂಪೂರ್ಣವಾಗಿ ಕಡಿದುಕೊಳ್ಳದೆ, ತನ್ನ ಪರಿಚಿತರ ಪೈಕಿ ಅತ್ಯಂತ ಯೋಗ್ಯರಾದವರೊಂದಿಗೆ ಪತ್ರ ವ್ಯವಹಾರವನ್ನಿಟ್ಟು ಕೊಳ್ಳಲಿ. ಆತನ ವಿದೇಶ ಪ್ರವಾಸದ ಫಲಶ್ರುತಿಯು ಆತನ ಸಂಭಾಷಣೆಯಲ್ಲಿ ಕಾಣಿಸಿಕೊಳ್ಳಬೇಕೇ ಹೊರತು, ಆತನ ಉಡುಪು ಮತ್ತು ಭಾವಾಭಿನಯಗಳಲ್ಲಿ ಕಾಣಿಸಿಕೊಳ್ಳಬಾರದು. ಆತ ಪ್ರಶ್ನೆಗಳಿಗೆ ಉತ್ತರ ನೀಡುವಾಗ ಎಚ್ಚರಿಕೆ ವಹಿಸಬೇಕು, ಕಥೆಗಳನ್ನು ಹೇಳಲು ಮುಂದಾಗಬಾರದು; ಆತ ವಿದೇಶಿ ನಡೆ-ನುಡಿಗಳಿಗೆ ಮನಸೋತು ತನ್ನ ದೇಶದ ನಡೆ ನುಡಿಗಳನ್ನು ಬದಲಾಯಿಸಿಕೊಂಡವನಂತೆ ಕಾಣದೆ, ತನ್ನ ದೇಶದ ನಡೆ-ನುಡಿಗಳಿಗೆ ವಿದೇಶಗಳಲ್ಲಿ ತಾನು ಕಲಿತ ನಡತೆಯ ಸೊಗಸಿನ ಕೆಲವು ಪುಷ್ಪಗಳನ್ನು ಅಳವಡಿಸಿಕೊಳ್ಳಲಿ.

(ಮೂಲ ಪ್ರಬಂಧ : "of Travel")

## ಸ್ವಾರ್ಥಪರ ವಿವೇಕವನ್ನು ಕುರಿತು

ಇರುವೆಯು ತನ್ನಮಟ್ಟಿಗೆ ವಿವೇಕಿ, ಆದರೆ, ಹಣ್ಣಿನ ತೋಟದಲ್ಲಿ ಹಾನಿಕಾರಿ. ನಿಜವಾಗಿಯೂ, ಮಹಾನ್- ಸ್ವಪ್ರೇಮಿಗಳಾದ ವ್ಯಕ್ತಿಗಳು ದೇಶಕ್ಕೆ ಹಾನಿಯುಂಟುಮಾಡುತ್ತಾರೆ. ಸ್ವ-ಪ್ರೇಮ ಮತ್ತು

ಸಮಾಜದ ನಡುವೆ ವಿವೇಚನಾ ಪೂರ್ವಕವಾಗಿ ಹೊಂದಾಣಿಕೆ ಮಾಡಿಕೊಳ್ಳಿ; ಇತರರಿಗೆ, ಮುಖ್ಯವಾಗಿ ನಿಮ್ಮ ಅರಸನಿಗೂ, ದೇಶಕ್ಕೂ, ನಿಮ್ಮಿಂದ ದ್ರೋಹವಾಗದಂತೆ ನೀವು ನಿಮ್ಮ ಆತ್ಮಸಾಕ್ಷಿಗೆ ಅನುಗುಣವಾಗಿ ನಡೆದುಕೊಳ್ಳಿ. ಸ್ವಹಿತವೆಂಬುದು ಮಾನವನ ಕಾರ್ಯಚಟುವಟಿಕೆಗಳ ಕ್ಷುಲ್ಲಕ ನೆಲೆ. ಅದು ತದ್ವತ್ತು ಭೂಮಿಯಂತೆ. ಅದೊಂದು ಮಾತ್ರ ಸ್ವಯಂ ಕೇಂದ್ರೀಕೃತ-ತನ್ನ ಸ್ವಂತ ಕೇಂದ್ರದ ಮೇಲೆ ನಿಂತಿದೆ; ಉಳಿದೆಲ್ಲ ಗ್ರಹಗಳು ಅದರ ಕೇಂದ್ರದ ಸುತ್ತ ಸುತ್ತಿ ಅದಕ್ಕೆ ಉಪಕಾರ ಮಾಡುತ್ತವೆ. ಎಲ್ಲವನ್ನೂ ತಮ್ಮ ಸ್ವಹಿತಕ್ಕೆ ಸಂಬಂಧಿಸಿದಂತೆ ಪರಿಗಣಿಸುವುದು ಸಾರ್ವಭೌಮರ ವಿಷಯದಲ್ಲಿ ಹೆಚ್ಚು ಸಹನೀಯವೆನಿಸುತ್ತದೆ. ಏಕೆಂದರೆ, ಅವರ ಒಳಿತು-ಕೆಡುಕುಗಳು ಅವರೊಬ್ಬರವು ಮಾತ್ರವೇ ಆಗಿರದೆ, ದೇಶದ ಒಳಿತು-ಕೆಡುಕುಗಳಾಗಿರುತ್ತವೆ. ಆದರೆ, ರಾಜನ ಸೇವಕನಲ್ಲಿ, ಗಣರಾಜ್ಯದ ಪ್ರಜೆಯಲ್ಲಿ ಅದೊಂದು ಅಪರಿಹಾರ್ಯ ಕೆಡುಕು. ಅಂತಹ ವ್ಯಕ್ತಿಯು ತನಗೆ ವಹಿಸಲಾದ ಯಾವುದೇ ಸರ್ಕಾರಿ, ಸಾರ್ವಜನಿಕ ವ್ಯವಹಾರಗಳನ್ನು ತನ್ನ ಸ್ವಂತ ಗುರಿಗಳ ಸಾಧನೆಗಾಗಿ ಮಣಿಸುತ್ತಾನೆ, ದುರುಪಯೋಗಪಡಿಸಿಕೊಳ್ಳುತ್ತಾನೆ. ಎಷ್ಟೋ ವೇಳೆ ಇಂತಹ ಸ್ವಹಿತಪರ ಉದ್ದೇಶಗಳು ರಾಜನ ಅಥವಾ ದೇಶದ ಗುರಿಗಳಿಗಿಂತ ವಿಭಿನ್ನವಾಗಿರುತ್ತವೆ. ಆದ್ದರಿಂದ, ರಾಜರು ಮತ್ತು ರಾಜ್ಯಗಳು ಈ ಗುಣವಿಲ್ಲದವರನ್ನೇ ತಮ್ಮ ಸೇವಕರನ್ನಾಗಿ ಆಯ್ಕೆಮಾಡಿಕೊಳ್ಳಲಿ. ಸ್ವಾರ್ಥಪರ ವ್ಯಕ್ತಿಗಳನ್ನು ನೇಮಿಸಿಕೊಳ್ಳುವುದಾದರೆ, ಅವರನ್ನು ಅಧಿಕಾರವಿಲ್ಲದ ಅಧೀನ ಸೇವೆಗೆ ನೇಮಿಸಿಕೊಳ್ಳಲಿ. ಒಡೆಯನ ಮತ್ತು ಸೇವಕನ ಗುರಿಗಳಲ್ಲಿ ಸಮತೆ, ಸಮರೂಪತೆ ಇಲ್ಲದಿರುವುದರಿಂದ ಪರಿಣಾಮವು ಹೆಚ್ಚು ಹಾನಿಕಾರಿಯಾಗುತ್ತದೆ; ಒಡೆಯನ ಒಳಿತಿಗಿಂತ ಮಿಗಿಲಾಗಿ ಸೇವಕ ತನ್ನ ಒಳಿತನ್ನು ಮುಂದಿಟ್ಟು ಕೊಳ್ಳುವುದೇ ಸಾಕಷ್ಟು ಅಸಮತೆ, ಅಸಮರೂಪತೆ ಆಗುತ್ತದೆ; ಒಡೆಯನ ಮಹತ್ತರ ಒಳಿತಿಗಿಂತಲೂ ಸೇವಕನ ಕಿಂಚಿತ್ ಒಳಿತೇ ಮೇಲುಗೈಯಾದಾಗ ಅಸಮತೆಯ ವಿಪರೀತ ಅತಿರೇಕವಾಗುತ್ತದೆ. ಕೆಟ್ಟ ಅಧಿಕಾರಿಗಳು, ಖಜಾಂಚಿಗಳು, ರಾಯಭಾರಿಗಳು, ಸೇನಾಪತಿಗಳು, ಮತ್ತಿತರ ಅಪ್ರಮಾಣಿಕ ಭ್ರಷ್ಟಸೇವಕರು ಆಟದ ಗುಂಡು ನೇರ ಪಥದಲ್ಲಿ ಉರುಳದೆ, ವಕ್ರಗತಿಯಲ್ಲಿ ಉರುಳುವಂತೆ ಮಾಡಲು ಸೀಸದ ತುಂಡನ್ನು ಸೇರಿಸುತ್ತಾರೆ. ಅರ್ಥಾತ್, ಅವರು ತಮ್ಮ ಸ್ವಂತ ಕ್ಷುಲ್ಲಕ ಸ್ವಹಿತಾಸಕ್ತಿಗಳು ಮತ್ತು ಅಸೂಯೆ-ಮಾತ್ಸರ್ಯಗಳ ಸಲುವಾಗಿ ನಿಷ್ಠೆಯ ಋಜುಪಥದಿಂದ ವಿಮುಖರಾಗಿ, ತಮ್ಮ ಒಡೆಯನ ಮಹತ್ವಪೂರ್ಣ, ಅತಿಮುಖ್ಯ ಕೆಲಸ-ಕಾರ್ಯಗಳನ್ನು ವಿಫಲಗೊಳಿಸಿಬಿಡುತ್ತಾರೆ. ಬಹುಮಟ್ಟಿಗೆ, ಅಂತಹ ಸೇವಕರು ಗಳಿಸಿಕೊಳ್ಳುವ ಲಾಭವು, ಅವರ ಅದೃಷ್ಟಕ್ಕೆ ತಕ್ಕ ಪ್ರಮಾಣದಲ್ಲಿ, ಅಲ್ಪವಾಗಿರುತ್ತದೆ; ಆ ಲಾಭದ ಸಲುವಾಗಿ ಅವರು ಉಂಟುಮಾಡುವ ಹಾನಿಯಾದರೋ ತಮ್ಮ ಒಡೆಯನ ಅದೃಷ್ಟಕ್ಕೆ ಅನುಗುಣವಾದ ಪ್ರಮಾಣದಲ್ಲಿರುತ್ತದೆ. (ದೇಶದ ಹಿತಾಸಕ್ತಿಗಳನ್ನು ಬಲಿಕೊಟ್ಟು ಅವರು ಗಳಿಸಿಕೊಳ್ಳುವ ಸ್ವಂತ ಲಾಭವು ಅವರು ಒಡೆಯನಿಗೆ / ದೇಶಕ್ಕೆ ಉಂಟುಮಾಡುವ ಅಪಾರ ಹಾನಿಯೊಂದಿಗೆ ಹೋಲಿಸಿದರೆ ಅಲ್ಪವೆನಿಸುತ್ತದೆ.) ವಿಪರೀತ ಸ್ವ-ಪ್ರೇಮಿಗಳಾದವರ ಸ್ವಭಾವ ಎಂಥದ್ದಾಗಿರುತ್ತದೆಯೆಂದರೆ, ತಮ್ಮ ಮೊಟ್ಟೆಗಳನ್ನಷ್ಟೇ ಬೇಯಿಸಲು ಅವರು ಒಂದು ಮನೆಗೇ ಬೆಂಕಿ ಹಚ್ಚಿಬಿಡುತ್ತಾರೆ. ಆದಾಗ್ಯೂ, ಎಷ್ಟೋ ವೇಳೆ, ಅವರು ತಮ್ಮ ಒಡೆಯರ ವಿಶ್ವಾಸವನ್ನು ಗಳಿಸಿಕೊಂಡಿರುತ್ತಾರೆ. ಏಕೆಂದರೆ, ಅವರನ್ನು ಮೆಚ್ಚಿಸುವುದು ಮತ್ತು ತಾವು ಲಾಭಗಳಿಸಿಕೊಳ್ಳುವುದು-

ಇವೆರಡೇ ಅವರ ಕಾಳಜಿಗಳು. ಇವೆರಡರಲ್ಲಿ ಯಾವುದಕ್ಕಾಗಿಯಾದರೂ ಸರಿಯೆ, ಅವರು ತಮ್ಮ ಒಡೆಯರ ವ್ಯವಹಾರಗಳನ್ನು ಕೆಡಿಸಿಬಿಡುತ್ತಾರೆ.

ಹಲವಾರು ಶಾಖೆಗಳನ್ನು, ಬಗೆಗಳನ್ನು ಒಳಗೊಂಡಿರುವ ಸ್ವಾರ್ಥಪರ ವಿವೇಕವು ಮನುಷ್ಯರನ್ನು ನೀತಿಭ್ರಷ್ಟರನ್ನಾಗಿ ಮಾಡುತ್ತದೆ. ಅದು ಇಲಿಗಳ ವಿವೇಕ-ಬೀಳಲಿರುವ ಮನೆಯನ್ನು ಬಿಟ್ಟು ಓಡಿಹೋಗುವ ಇಲಿಗಳ ವಿವೇಕ. ಅದು ನರಿಯ ವಿವೇಕ-ತನಗೆ ವಾಸಿಸಲು ಬಿಲವನ್ನು ತೋಡಿಕೊಟ್ಟ ನೆಲಗರಡಿಯನ್ನು ಓಡಿಸುವ ನರಿಯ ವಿವೇಕ. ಅದು ಮೊಸಳೆಗಳ ವಿವೇಕ-ಮನುಷ್ಯರನ್ನು ನುಂಗಿ ಹಾಕುವ ಮುಂಚೆ ಕಣ್ಣೀರು ಸುರಿಸುವ ಮೊಸಳೆಗಳ ವಿವೇಕ. ಆದರೆ, ವಿಶೇಷವಾಗಿ ಗಮನಿಸಬೇಕಾದ ಸಂಗತಿಯೆಂದರೆ, ಸಿಸಿರೊ ಪಾಂಪೆಯನ್ನು ಕುರಿತು ಹೇಳುವಂತೆ "ತಮ್ಮ ಸ್ವ-ವಿವೇಕದಿಂದ ಅದೃಷ್ಟದ ರೆಕ್ಕೆ-ಪುಕ್ಕಗಳನ್ನು ಕತ್ತರಿಸಿ, ಹಾರಿಹೋಗದಂತೆ ಹಿಡಿದಿಟ್ಟು ಕೊಂಡಿರುವುದಾಗಿ ತಿಳಿದು ಕೊಂಡಿರುವ ಆ ವ್ಯಕ್ತಿಗಳು-ತಮ್ಮ ಸಮಯವನ್ನೆಲ್ಲ ತಮಗಾಗಿಯೇ ಬಲಿಕೊಟ್ಟರು-ಕಡೆಗೆ ತಾವೇ ಅದೃಷ್ಟದ ಚಂಚಲತೆಗೆ ಬಲಿಯಾಗುತ್ತಾರೆ.

(ಮೂಲ ಪ್ರಬಂಧ : "of Wisdom for a Man's Self")

●

ವಿ. ಶ್ರೀನಿವಾಸ, ನಂ. ೨೧೨, ೨ನೇ ಕ್ರಾಸ್, ೧ನೇ ಜಿ. ಮುಖ್ಯರಸ್ತೆ, ಜಕ್ಕಸಂದ್ರ ಬಡಾವಣೆ
೧ನೇ ಬ್ಲಾಕ್, ೧ನೇ ಮೇನ್, ಕೋರಮಂಗಲ, ಬೆಂಗಳೂರು - ೫೬೦ ೦೩೪

# ಚೆಪ್ಪನಿಯಾ

ಗುಜರಾತಿ ಮೂಲ : **ದಳಪತ್ ಚೌಹಾನ್**
ಅನುವಾದ : **ಎಂ. ಎಸ್. ಶಿವಮೂರ್ತಿ**

ಬದುಕಿನ ಕೇಂದ್ರದಿಂದ ಬಲು ದೂರ, ಹಳ್ಳಿಯ ಅಂಚಿನಲ್ಲಿ ಮಣ್ಣುಗೋಡೆಯ ಅಡ್ಡಾದಿಡ್ಡಿ ಕಟ್ಟಿದ ಸುಮಾರು ಒಂದು ಡಜನ್ ಸಣ್ಣಸಣ್ಣ ಗುಡಿಸಲುಗಳಿದ್ದವು. ಅದು ನೇಕಾರರ ಮತ್ತು ಚಮ್ಮಾರರ ಬೀದಿಯಾಗಿತ್ತು. ಅದೊಂದು ಸ್ತಬ್ಧ-ಶಾಂತ ಮಧ್ಯಾಹ್ನ ಮತ್ತು ಒಂದೆಲೆಯೂ ಅಲ್ಲಾಡುತ್ತಿರಲಿಲ್ಲ. ಸುಗ್ಗಿಕಾಲ. ಹಾಗಾಗಿ ರೈತರೆಲ್ಲಾ ಕುಯಿಲಿನಲ್ಲಿ ಮಗ್ನರಾಗಿದ್ದರು. ಕೇರಿಯ ಹೊಸ್ತಿಲಲ್ಲಿ ಬೀದಿ ನಾಯಿಯೊಂದು ಕೆಸರಿನ ಕೊಳ್ಳವೊಂದರ ಸುತ್ತ ಇದ್ದ ಕೆಸರನ್ನು ನೆಕ್ಕಾಡುತ್ತಿತ್ತು. ಇದ್ದಕ್ಕಿದ್ದಂತೆ ಎದ್ದು ನಿಂತು ಬಾಲ ಅಲ್ಲಾಡಿಸಿ, ಆಕಾಶದ ಕಡೆ ನೋಡಿತು. ಬೊಗಳಲೆಂದು ಬಾಯಿ ತೆರೆದು ಅದು ತನ್ನನ್ನು ತಾನೇ ನಿಯಂತ್ರಿಸಿಕೊಂಡಿತು. ಕೇರಿಯ ಒಳಗೆ ನಡೆದು ಗೋಕುಲನ ಗುಡಿಸಲಿನ ಮುಂದೆ ಒಂದು ಘಳಿಗೆ ನಿಂತಿತು. ಮತ್ತೆ ಮುಂದಿನ ಗುಡಿಸಲ ಕಡೆ ಹೊರಟು ಅದರ ಮುಂದೆ ಆರಾಮವಾಗಿ ಏದುಸಿರು ಬಿಡುತ್ತಾ ಕೆಡೆಯಿತು, ನಾಲಗೆಯನ್ನು ಬಾಯಿಂದ ಹೊರಗೆ ನೇತಾಡಿಸುತ್ತಾ.

ಬಹಳ ಹೊತ್ತಿನಿಂದ ನರಳಾಡುತ್ತಿದ್ದ ಗೋಕಲ ಅಂಗಳದಲ್ಲಿದ್ದ ಒಂದು ಮಂಚದ ಮೇಲೆ ಮಲಗಿದ್ದ. ಅವನ ದೇಹ ಬದುಕು ಎಂಬ ದುರ್ಬಲವಾದ ದಾರದಿಂದ ಪೋಣಿಸಲ್ಪಟ್ಟ ಮೂಳೆಗಳ ಸರಮಾಲೆಯಂತಿತ್ತು. ಅವನ ಮೊಮ್ಮಗ ನ್ಯಾನಿಯೋ ಅವನನ್ನೇ ನೋಡಿಕೊಳ್ಳುವ ಸಲುವಾಗಿ ಮನೆಯಲ್ಲೇ ಇದ್ದ. ಕೇರಿಯ ಉಳಿದ ಗುಡಿಸಲುಗಳು ಖಾಲಿಯಾಗಿದ್ದವು.

ನ್ಯಾನಿಯೋ ಎಂಟು ವರ್ಷದ ಹುಡುಗ. ಸೊಂಟದವರೆಗೆ ಎಟುಕಿಯೂ ಎಟುಕದಂತಿದ್ದ ಕೊಳೆ ಅಂಗಿಯೊಂದನ್ನು ಧರಿಸಿದ್ದ. ಕೈಗಳು ಕೆಸರಿನಿಂದ ಕೂಡಿದ್ದವು. ಅವನ ಕಣ್ಣುಗಳು ಹೊಳೆಯುತ್ತಿದ್ದವು ಮತ್ತು ಆಟಗಳು, ಚೇಷ್ಟೆಗಳ ಬಗೆಗಿದ್ದ ಅವನ ಉತ್ಸಾಹ ಅಪಾರವಾಗಿತ್ತು. ಅವನು ತನ್ನ ತಂದೆ-ತಾಯಿಗಳಿಗೆ ಹೊಲದಲ್ಲಿ ಸಹಾಯ ಮಾಡಬಲ್ಲವನಾಗಿದ್ದ. ಆದರೆ ಯಾರಾದರೂ ಒಬ್ಬರು ಗೋಕುಲನನ್ನು ನೋಡಿಕೊಳ್ಳುವ ಸಲುವಾಗಿ ಮನೆಯಲ್ಲಿರಬೇಕಿತ್ತು. ನ್ಯಾನಿಯೋ ಈಗ ಜೋಳದ

ಕಡ್ಡಿಯಿಂದ ಮಾಡಿದ್ದ ಗಾಡಿಯ ಜೊತೆ ಬಿಜಿಯಾಗಿದ್ದ. ಗೋಕಲ ಕೆಮ್ಮಿದ. ಹೊಗೆಸೊಪ್ಪಿನ ಒಂದು ಧಮ್ಮಿಗಾಗಿ ಆತ ತವಕಿಸುತ್ತಿದ್ದ. ಬಹಳ ಕಷ್ಟಪಟ್ಟು ಎದ್ದು ಕೂತ. ಆದರೆ ಮಂಚದಿಂದ ಕೆಳಗಿಳಿಯಲಾಗಲಿಲ್ಲ. ಎದ್ದು ಒಂದಕ್ಕೆ ಹೋಗುವ ಒತ್ತಡ ಒಳಗೇ ಇದ್ದರೂ ಅದನ್ನು ನಿಯಂತ್ರಿಸಿಕೊಂಡ. ಆದರೆ ಅವನಿಗೆ ಒಂದು ಧಮ್ಮಂತೂ ಜರೂರಾಗಿ ಬೇಕಿತ್ತು.

"ಅಡ ನ್ಯಾನಿಯೋ ಎತ್ತಗೋದೆ ಡಾ?"

ಉತ್ತರ ಬರಲಿಲ್ಲ. ಗೋಕಲ್ ಧ್ವನಿಯೆತ್ತರಿಸಿ "ಈ ಪಲ್ಲಿ ಬಡ್ಡೆತ್ತದು ಒಂದು ಗಳಿಗ್ಯಾರ ಅಟ್ಟಿಲಿರಲ್ಲ. ಅಡ ನ್ಯಾಸಿಯೋ ನಾ ಕೂಗದ್ ಕೇಳ್ಲಿಲ್ವಾ?"

"ಏನ್ತಾತಾ? ಕರ್ದೆಲ್ವಾ ಏನು?" ನ್ಯಾಸಿಯೋ ಒಳಗೆ ಓಡಿಬರುತ್ತಲೇ ಕೇಳಿದ.

"ಹುಕ್ಕಾ ತುಂಬ್ಸಪ್ಪಾ ಬಿಸಿ. ಬೆಣ್ಣಗಳು ಕೊಟ್ಟಿಗಲವ. ತಕ್ಕಂದು ಬಿಂಕಿಕಸ್ಸು."

"ಊಂಕಾ ತಾತಾ." ನ್ಯಾಸಿಯೋ ಹುಕ್ಕಾ ಕಿಡಿ ಮಾಡುವುದರಲ್ಲಿ ನಿರತನಾದ. ಕೊಳವೆಯನ್ನು ನೀರನ್ನು ಬದಲಾಯಿಸಿದ. ತುದಿಯಲ್ಲಿದ್ದ ಇದ್ದಿಲು ಮತ್ತು ಬೂದಿಯನ್ನು ತೆಗೆದು ಹಾಕಿದ. ಗೋಡೆಯ ಮೇಲಿನಿಂದ ನೇತಾಡುತ್ತಿದ್ದ ತೂಗಲಿನ ಚೀಲದಿಂದ ಒಂದಷ್ಟು ಹೊಗೆಸೊಪ್ಪು ತೆಗೆದುಕೊಂಡು ಉಂಡೆಕಟ್ಟಿದ. ಕೊಟ್ಟಿಗೆಯಲ್ಲಿ ಉರಿಯುತ್ತಿದ್ದ ಒಂದು ಬೆರಣಿಯನ್ನು ತೆಗೆದುಕೊಂಡು ಅದರ ಮೇಲೆ ಇನ್ನೆರಡು ಹಸಿ ಬೆರಣಿಗಳನ್ನಿಟ್ಟು ಘೋರ್ರನೆ ಊದಿದ. ಹೊಗೆಸೊಪ್ಪಿನ ಉಂಡೆಯನ್ನು ಹುಕ್ಕಾ ಮೇಲಿಟ್ಟು ಬಿರಡೆಯನ್ನು ಭದ್ರ ಪಡಿಸಿದ ಮತ್ತು ಹೊಗೆ-ಕೋಣೆಯನ್ನು ಕೆಂಪಗೆ ಉರಿಯುತ್ತಿದ್ದ ಬೆರಣಿಯ ಕೆಂಡಗಳಿಂದ ತುಂಬಿಸಿದ. ಇದಾದ ಮೇಲೆ ತಕ್ಷಣ ಒಂದೆರಡು ಧಮ್ಮೆಳೆದುಕೊಂಡ ಗ್ಲುಕ್ ಗ್ಲೊಕ್ ಅಂತ. ಶಬ್ದ ಕೇಳಿಸಿಕೊಂಡ ಗೋಕಲ ಮಲಗಿದ್ದಲ್ಲಿಂದಲೇ ಕಿರುಚಿದ "ಏಯ್ ನ್ಯಾಸಿಯೋ? ಯಾನುಡ ನೀ ಮಾಡದು? ನನ್ನಕ್ಕಿಂತ್ಲಿ ಹುಕ್ಕಾ ಸೇದಿಯಾ? ಬಾಯಿಲ್ಲಿ ರಾಸ್ಕೊಲ್! ದೊಡ್ಡನ್ನಾ ಇಂವ ಉಕ್ಕಾ ಸೇದ್ತನಾ ಉಕ್ಕಾ. ಏಯ್ ಕರೀತಿರದ್ ಕ್ಯಾಳಲ್ವಾ?"

ನ್ಯಾಸಿಯೋ ಆತುರಾತುರವಾಗಿ ಒಳಬಂದ. ಗೋಕಲನ ಕೈಗೆ ಹುಕ್ಕಾ ನೀಡಿ ತನ್ನ ಗಾಡಿಯೊಂದಿಗೆ ಆಡಲು ಹಿಂದಿರುಗಿದ.

"ಏನ್ ಒಳಗ್ಯಾರಾರೂ ಇದ್ದೀರೇನ್ರಯ್ಯಾ" ಒರಟಾದ ಒಂದು ಧ್ವನಿ ಕೇರಿಯ ಪ್ರಾರಂಭದ ದಿಕ್ಕಿನಿಂದ ಕೇಳಿಬಂತು.

ನಾಯಿ ಧಡಕ್ಕನೆ ಎದ್ದು ಕೇರಿಯ ದ್ವಾರದೆಡೆಗೆ ಓಡಿತು. ನಂತರ ಬೆತ್ತದ ಬೀಸಿನ ಸದ್ದು ಮತ್ತು ನಾಯಿಗೆ ಬಿದ್ದ ಏಟುಗಳ ಶಬ್ದ ಕೇಳಿಸಿತು. ಆಮೇಲೆ ನಾಯಿಗೆ ಬಾಯ್ತುಂಬ ಸುರಿಸಿದ ಬೈಗುಳಗಳು ಮತ್ತು ಕುಯ್ಗುಟ್ಟುವ ಸದ್ದು ಸಣ್ಣ ಬೊಗಳುವಿಕೆಯೊಡನೆ ಕಿವಿಗೆ ಬಿತ್ತು. ಗೋಕಲ ನಾಯಿಯನ್ನು ಕೂಗಿದ. ನಾಯಿ ಹಿಂತಿರುಗಿ ಓಡಿಬಂದು ಗೋಕಲನ ಹಟ್ಟಿಯ ಮುಂದೆ ನಿಂತು ಹುರುಪಿನಿಂದ ಧಡಧಡ ಸದ್ದು ಮಾಡುತ್ತಾ ತಲೆಯಲ್ಲಾಡಿಸಿತು.

"ನ್ಯಾಸಿಯೋ, ಓ ನ್ಯಾಸಿಯೋ, ನೋಡು ಯಾರ್ಬಂದಿದ್ದರು ಅಂತ."

ಯಾವುದೇ ಮಾರುತ್ತರ ಬರದೇ, ಗೋಕಲ ಪಕ್ಕ ತಿರುಗಿ ನೋಡಿದವನೇ ಹುಕ್ಕಾ ಸೇದುವುದರಲ್ಲಿ ನಿರತನಾದ. ಅವನು ತನ್ನ ದೇಹವನ್ನು ಅಲುಗಾಡಿಸಲು ಪ್ರಯತ್ನಿಸಿದ. ಆದರೆ ಅದು ಬಹಳ ತ್ರಾಸದಾಯಕವೆನಿಸಿತು. ನ್ಯಾಸಿಯೋ ತನ್ನ ಪಾಡಿಗೆ ತಾನು ಗಾಡಿಯೊಂದಿಗೆ ಆಡುತ್ತಿದ್ದ.

ಗೋಕಲನ ಹಟ್ಟಿಯ ಕಡೆಗೇ ಧಾವಿಸುತ್ತಿರುವ ಬಿರುಸಾದ ಹೆಜ್ಜೆಗಳ ಸಪ್ಪಳ ಕೇಳಿಸಿತು. ಒಂದು ಮನುಷ್ಯಾಕೃತಿ ಹೆಂಡದ ಗಮಲಿನೊಡನೆ ಕಾಣಿಸಿಕೊಂಡಿತು. ಗೋಕಲನಿಗೆ ರಕ್ತಗಟ್ಟಿದ ಕಣ್ಣುಗಳ ಆ ನೋಟ ಪರಿಚಿತವಿತ್ತು. "ಓ ವಜೀಸಂಘಪ್ಪಾ, ಬನ್ನಿ, ಬನ್ನಿ, ನಮಸ್ಕಾರ! ನಮಸ್ಕಾರ! ಚೆನ್ನಾಗಿದ್ದರ್ರ್ಯಾ?" ಎಷ್ಟು ಸಾಧ್ಯವೋ ಅಷ್ಟೂ ವಿನಮ್ರನಾಗಿ ಗೋಕಲ ಕೇಳಿದ. "ಏನ್ಸಮಾಚಾರ? ಏನ್ಬಂದ್ರ್ಯಪ್ಪಾ?" ವಜೀಸಂಘ್ ಒಬ್ಬ ಮಧ್ಯವಯಸ್ಕ. ತನ್ನ ಸಮಯದ ಬಹುಪಾಲು ಕುಡಿತದ ಅಮಲಿನಲ್ಲಿಯೇ ಇರುತ್ತಿದ್ದ ಅವನು ಈಗ ಎಂದಿಗಿಂತ ತುಸು ಹೆಚ್ಚಾಗಿಯೇ ಕುಡಿದು ಬಂದಿರುವಂತಿತ್ತು. ಬಟ್ಟೆಗಳು ಕೊಳಕಾಗಿದ್ದವು ಮತ್ತು ಅಲ್ಲಲ್ಲಿ ಹರಿದಿದ್ದವು. ತಲೆ ಮೇಲಿನ ಪೇಟ ಸರಿಯಾಗಿ ಕೂತಿರಲಿಲ್ಲ. ಕೈಯಲ್ಲಿ ಬೆತ್ತದ ಒಂದು ಕೋಲು ಹಿಡಿದಿದ್ದ.

ಗೋಕಲ ಮಂಚದ ಮೇಲೆ ಮಲಗಿರುವುದನ್ನು ಕಂಡು ವಜೀಸಂಘನ ಕಣ್ಣುಗಳು ಅಚ್ಚರಿಯಿಂದ ಅಗಲವಾದವು. ಗೋಕಲನ ನಮಸ್ಕಾರಕ್ಕೆ ಅವನು ಪ್ರತಿಕ್ರಿಯಿಸಲಿಲ್ಲ. ಎಡಗೈಯಿಂದ ತಾತ್ಸಾರದ ಒಂದು ಸನ್ನೆಮಾಡಿ

"ಓ, ಯಾನಣ್ಣಾ ಜಾಡ್ಮಾಲಿ....ಏನ್ಮಾಡ್ತೇ ಇವ್ನಿ ಅಂದ್ಕಂದಿದ್ದಯೀ? ತಣ್ಣಗ ಮಂಚದ ಮ್ಯಾಲ ಕೂತ್ಬುಟ್ಟು 'ಚೆನ್ನಾಗಿದ್ದರ್ರ್ಯಾ? ಏನ್ಬಂದ್ರಿ?' ಅಂತಿದ್ದಯಲ್ಲಾ ಬಾರಿ ಚಮತ್ಕಾರವಾಗಿದ್ದೈಕಣಯ್ಯಾ ನೀನುವೀ" ಅಂದ.

ಗೋಕಲ ಭಯದಿಂದ ವಜೀಸಂಘನನ್ನ ದಿಟ್ಟಿಸಿದ.

"ಬಡ್ಡೀ ಐದ್ನೇ ನಾ ಏಳದ್ ಕೇಳ್ತಾ ಇದ್ದಾ? ಉಕ್ಕಾ ಸೇದಯಾ? ನನ್ಕಣ್ಣ ನಾನೇ ನಂಬಕ್ಕಾಗಲ್ವಲ್ಲಾ....ಏಯ್ ನನ್ನೇ ಏನ್ ದುರುಗುಟ್ಟಗ್ನೋಡಿಯುಡಾ? ನಿನ್ಜೀವ್ಮಾನ್ದಲ್ಲಿದೇ ಪಸ್ಟ್ ನನ್ನೋಡ್ತೇ ಇರದು?"

ಗೋಕಲ ತನ್ನೆಲ್ಲಾ ಶಕ್ತಿಯನ್ನು ಬಳಸಿ ಮೇಲೇಳಲು ಪ್ರಯತ್ನಿಸಿದ. ಆದರೆ ಪ್ರಯತ್ನ ವ್ಯರ್ಥವಾಯ್ತು. ಪ್ರಯತ್ನಪೂರ್ವಕವಾಗಿ ತನ್ನ ಕೈಯಾನಿಸಿ ಹುಕ್ಕಾವನ್ನು ಗೋಡೆಯ ಮೇಲೆ ಒರಗಿಸಿಟ್ಟ. ಅವನಿಗೆ ತನ್ನ ಮೂತ್ರವನ್ನು ತಡೆಯಲಾರೆನೆನ್ನಿಸಿತು. ತನ್ನ ಎರಡೂ ಕೈಗಳನ್ನು ಅರ್ಪಣೆಯ ಧಾಟಿಯಲ್ಲಿ ಜೋಡಿಸಿ ಬೇಡಿಕೊಂಡ "ಜರ ಬಂದು ನಳ್ತಾ ಔನಿ. ಯಾಳಕ್ಕಾಗುದ್ದ. ಅದ್ಕೇ ಮಂಚದ ಮ್ಯಾಲೇ ಬಿದ್ದಿನಿ. ದಯವಂತರುಕಪ್ಪಾ ನೀವು. ಅರ್ಥ ಮಾಡ್ಕಳಿ."

ವಜೀಸಂಘನ ಕೋಪ ಮೆದುವಾಗಲಿಲ್ಲ. "ಓಹೋ ಅಂಗ್ಯಾ ಜಾಡಮಾಲೆಪ್ಪಾ? ಎಂತಾ ಜರವಪ್ಪಾ?" ವ್ಯಂಗ್ಯವಾಗಿ ನುಡಿದ. "ನಿಂಗಾ ಮೂರ್ಸೀಟ್ ಗಂಡಾಳವ್ರ ಅಂತ ಸುತ್ತಮುತ್ತಲ ಜನವಾ ಕಟ್ಟಾಳ್ಬೋದು ಅಂತ ತಿಳ್ಕಂದಿದ್ದಯಾ? ಬುದ್ಗೆಟ್ಟವ್ನೆ ನೀನು ನಮ್ಮುಂದೇ ಅರ್ಥವಿಲ್ದೇ ಮಾತಾಡಿಯಾ?"

"ಇಲ್ಲಕಪ್ಪಾ ನಿಮಗ್ ಕೈಮುಗಿತೀನಿ! ನಂಗ ಶ್ಯಾನೆ ಜರ. ಅಂಗಾಗ್ಬುಟ್ಟೂ...." ಗೋಕಲ ಇನ್ನೂ ಮಾತು ಮುಗಿಸಿರಲಿಲ್ಲ. ಅಷ್ಟರಲ್ಲಿ ವಜೀಸಂಘನ ಬೆತ್ತದ ಕೋಲು ಗಾಳಿಯಲ್ಲಿ ಬೀಸಿ ಬಂದು "ಛಟೀರ್ ಫಟೀರ್...." ಒಂದರ ಮೇಲೊಂದು ಹೊಡೆತ.

ಛಟೀರ್! ಫಟೀರ್!

"ಅಯ್ಯಯ್ಯಪ್ಪೋ! ಅಯ್ಯೋ....ಅಯ್ಯಯ್ಯಪ್ಪೋ!"

ಕೋಲು ಗೋಕಲನ ಮೈಮೇಲೆ ಕಪ್ಪು, ಕೆಂಪು ಬಾಸುಂಡೆಗಳನ್ನು ಮೂಡಿಸಿತು. ನಡುಗಿದ ನ್ಯಾನ್ಸಿಯೋ ಆಟದಿಂದ ವಿಮುಖಿವಾಗಿ ಮೌನವಾಗಿ ನೋಡತೊಡಗಿದ.

ಛಟೀರ್! ಫಟೀರ್!

ಗೋಕಲ್ ಏಟುಗಳನ್ನು ತಾಳಲಾರದೇ ನೆಲಕ್ಕೆ ಕುಸಿದುಬಿದ್ದಾಗ ಚೀರಾಟವೂ ನಿಂತಿತು. ಆದರೆ ವಜೇಸಂಘನ ಕಣ್ಣುಗಳು ಎಷ್ಟು ಮಂಜಾಗಿದ್ದವೆಂದರೆ ಗೋಕಲ ಬಿದ್ದದ್ದೇ ಅವನಿಗೆ ಕಾಣಲಿಲ್ಲ. ಕೋಲು ಬರಿಯ ಮಂಚವನ್ನು ಬಡಿಯುತ್ತಿದ್ದಾಗಲೇ ಅವನಿಗೆ ತಿಳಿದದ್ದು ಗೋಕಲ ಬಿದ್ದು ಹೋಗಿದ್ದಾನೆಂದು. ನೆಲದ ಮೇಲೆ ಅಂಗಾತ ಮಲಗಿದ್ದ ಗೋಕಲನನ್ನು ನೋಡಿದಾಗ ಅವನ ಕೈ ಬೀಸುವಿಕೆ ನಿಂತಿತು. "ಈಗ ನೀನು ದಾರಿಗ್ಬಂದ. ಕಲಬೆರಕ ಬಡ್ಡಿಮಗ್ನೇ! ಅದು, ಅದು ನೀ ಸೇರ್ಬೇಕಾದ್ ಜಾಗ! ಮಣ್ಣು ಮಣ್ಗ ನೀ ಸೇರಬೇಕಾದ್ದು! ಇನ್ನೂ ನಾಲಗ ಕುಣಿಸಾಡಿಯಾ! ನಿನ್ನ ದಾರಿಗ್ ತರ್ಬೇಕಾರ ಒಂದ್ ಸರಿಯಾಗಿರ ಬೆತ್ತ ಬೇಕು."

"ಥೂ!" ವಜೇಸಂಘ ಬಾಯ್ತುಂಬ ಬಂದ ಉಗುಳನ್ನು ಕ್ಯಾಕರಿಸಿ ಉಗಿದು, ಹಟ್ಟಿಯೊಳಗೆಲ್ಲಾ ಒಂದು ಹುಡುಕಾಟದ ದೃಷ್ಟಿಹಾಯಿಸಿ ಹೊರಗೆಹೊರಟ. ಹೊರಗಡೆ ಕುಳಿತಿದ್ದ ನಾಯಿ ಅಷ್ಟೊತ್ತಿಗಾಗಲೇ ಹೊರಡಲು ಶುರಮಾಡಿತ್ತು, ಬಾಲವನ್ನು ಹಿಂಗಾಲುಗಳ ನಡುವೆ ಮುದುರಿಕೊಂಡು.

ಗೋಕಲ ಕಣ್ಣು ಬಿಡುವುದಕ್ಕೆ ಸ್ವಲ್ಪ ಹೊತ್ತು ಮುಂಚೆ; ಕಣ್ಣೀರು ಅವನ ದೃಷ್ಟಿಯನ್ನು ಮುಚ್ಚಿಬಿಟ್ಟವು. ಅವನು ನೆಲದ ಮೇಲೆ ತಡಕಾಡುತ್ತಿದ್ದ. ಕಣ್ಣೀರ ನದಿಯ ತೀರದಲ್ಲಿ ಒಂದು ಮುಖ. ಮಬ್ಬುಮಬ್ಬಾದ ಒಂದು ಪ್ರೇತದಂತೆ ಅದರ ಮುಖ, ಯಥಾವತ್ ವಜೇಸಂಘನ ತರಹದ್ದೇ. ಅವನ ನೆನಪುಗಳ ಗೋರಿಯಿಂದೆದ್ದು ಬಂದಂತಿತ್ತು. ಒಡನೆಯೇ-

ಅಳೆಯಲಾಗದ ಆಳದಿಂದ ಒಂದು ಧ್ವನಿ ಕರೆಯುತ್ತಿರುವುದು ಕೇಳಿಸಿತು.

"ಗೋಕಲ್, ಗೋಕಲ್‌ಭಾಯ್!"

'...................................'

"ಕಿಟಕಿ ತಗೀ! ಕತ್ತಲಲ್ನಿಂತೀನಿ ನಾನು."

"ವಜೇಸಂಘನ ತಂದೆ....!" ಗೋಕಲ್ ಉಸುರಿದ.

ಚಿಪ್ಪನಿಯಾ* ದಿನಗಳ ಕತ್ತಲೆಯ ಒಂದು ರಾತ್ರಿ. ಮುಚ್ಚಿಹೋದ ಅವನ ನೆನಪಿನ ಕವಾಟಗಳನ್ನು ತೆಗೆಯುತ್ತಿದ್ದಂತೆಯೇ.....

"ಗೋಕಲ್.....ನಾನು ಮಘುಸಂಘ್. ನಾನು ಊರೆಲ್ಲಾ ಹುಡುಕ್ದೆ. ಪ್ರಯೋಜ್ನಿಲ್ಲ. ನಮ್ ನಸೀಬ್ ಸರಿಲ್ಲಕಾ ತಮ್ಮಯ್ಯಾ. ವಜೋ, ಅಪ್ರವ್ವಾ,ನಾನು ಮೂರ್ಜನ್ನೂ ಮೂರ್ಜಿನಿಂದ

---

* ಚಿಪ್ಪನಿಯಾ-ಕ್ರಿ.ಶ. ೧೮೯೯-೧೯೦೦ನೇ ಇಸವಿಗಳಲ್ಲಿ ಕಾಣಿಸಿಕೊಂಡು ಗುಜರಾತನ್ನು ತತ್ತರಿಸಿ ಹೋಗುವಂತೆ ಮಾಡಿದ ಭೀಕರ ಕ್ಷಾಮ. ಜಮೀನುಗಳಲ್ಲಿ ಏನೂ ಬೆಳೆಯದ ಕಾರಣ ಮೇಲ್ವರ್ಗದ ಮೇಲು ಜಾತಿಯ ಜನ (ಸಸ್ಯಾಹಾರಿಗಳು) ಸಮಸ್ಯೆಗೆ ಸಿಲುಕಿದರು. ದಲಿತರು, ಆದಿವಾಸಿಗಳು ದನ-ಕುರಿಗಳ ಮಾಂಸ ತಿಂದು ಬದುಕಿಕೊಂಡರು. ಹಸಿವಿನಿಂದ ಕಂಗೆಟ್ಟ ಸಸ್ಯಾಹಾರಿಗಳು ಕತ್ತಲಾಗುತ್ತಲೇ ದಲಿತರು, ಆದಿವಾಸಿಗಳ ಮನೆಗೆ ಹೋಗಿ ಒಣಮಾಂಸ ಪಡೆದು ಕದ್ದು-ಮುಚ್ಚಿ ತಿನ್ನುವುದು ಸಾಮಾನ್ಯವಾಗಿತ್ತು.

ಹೊಟ್ಗೇನೂ ಇಲ್ಲ. ಜೂರೂ ಸಿಕ್ಕಿಲ್ಲ. ಊರ್ಗೂರ್ಗೇ ಒಕ್ಕಲೆದ್ದೋಗದ. ಎಲ್ಲಾ ಊರ್ಬುಟ್ಬೊಂಟೋಗರ. ಎಲ್ಲೂ ಯಾನೂ ಸಿಕ್ತೇ ಇಲ್ಲ. ಅದ್ಕೇ ನಾನು ನಿನ್ತಾಕ್ ಬಂದೀನಿ."

ಗೋಕಲ್ ಆ ಅಶರೀರವಾಣಿಯನ್ನು ಕೇಳಿಸಿಕೊಂಡ. ಹಸಿವು ಆ ದನಿಯನ್ನು ಗೊಗ್ಗರಾಗಿಸಿತ್ತು.

"ಬನ್ನಿ ಮಧುವಪ್ಪಾ, ಸಂತೋಸ. ಆದ್ರೇನ್ಮಾಡ್ಲೆಳಿ? ನಿಮಗ್ಕೊಡಕ್ಕ ನನ್ತವೂ ಏನೂ ಇಲ್ಲ. ಒಂದ್ಕಾಳೂ ಇಲ್ಲ ಬುದ್ದೀ. ಒಂದಷ್ಟ್ ಕೊರ್ಬಾಡ್ ಅವ ಅಷ್ಟಿಯಾ. ಆದ್ರ ಅವನ್ನೀವ್ ತಿನ್ನಗಿಲ್ವಲ್ಲಾ.'

"ಆಯ್ತು ಕೊಡು ತಮ್ಮಯ್ಯಾ ನಾ ಈಸಗ್ತಿನಿ. ಏನೂ ಇಲ್ದೇ ಇರದ್ಕಿಂತ ಕೊರ್ಬಾಡ್ ವಾಸಿ ಅಲ್ವಾ? ನಾವು ಸತ್ತೇಣಾ ತಿನ್ಬೇಕು ಅನ್ನದು ದೇವರಿಷ್ಟ ಆಗಿದ್ರ ಅಂಗೇ ಆಗ್ಲಿ. ನಾನು ಹಸಿವ್ನಿಂದ ಸಾಯಕ್ ತಯಾರಿಲ್ಲ ಅಷ್ಟೇ."

ನ್ಯಾನಿಯೋನ ಅಜ್ಜಿಯ ಕಣ್ಣು ತಪ್ಪಿಸಿ ಗೋಕಲ ಮಧುಸಂಘನ ಕುರ್ತಾದ ಮಡಿಲನ್ನು ಕೊರಬಾಡುಗಳಿಂದ ತುಂಬಿಸಿದ. ಮಧುಸಂಘನ ಮನೆಯ ಅಡಿಗೆ ಕೋಣೆಯೊಳಗೆ ಕುದಿಯುತ್ತಿರುವ ಒಣಮಾಂಸದ ಆ ಪರಿಮಳ ಗೋಕಲನ ಮೂಗನ್ನು ಆವರಿಸಿತು.

"ನಾ ಬದ್ಕಿರಗಂಟ ನಿನ್ನೀ ಉಪಕಾರ ಮರಿಯಲ್ಲಕಾ ತಮ್ಮಯ್ಯ."

ಕೂಗುಗಳ ಗದ್ದಲವೊಂದು ಅವನ ಇಂದ್ರಿಯಗಳನ್ನು ಮರಳಿಸಿತು. "ವಜೋ ವಜೇಸಂಘ್...."

ಗೋಕಲ್ ತನ್ನ ಬಾಯಿಯಲ್ಲಿ ತುಂಬಿಕೊಂಡಿದ್ದ ರಕ್ತದ ಒಸರನ್ನು ಉಗಿಯುವ ವ್ಯರ್ಥ ಪ್ರಯತ್ನ ಮಾಡಿದ. ಕೆಮ್ಮು ಒತ್ತರಿಸಿ ಬಂತು. ಆದರೆ ದೇಹವನ್ನು ಸೀಳುವಂತಹ ಸೆಳೆತದಿಂದಾಗಿ ಒಳಗೇ ಬತ್ತಿಹೋಯ್ತು. ಮತ್ತೆ ವಜೇಸಂಘನ ನೆರಳು ಅವನ ಮುಂದೆ ಅವತರಿಸಿದಂತಾಗಿ ತಲೆ ತಿರುಗಿತು. ಮತ್ತೆ ಪ್ರಜ್ಞೆ ಬಂದಾಗ ಅವನ ತುಟಿಗಳು ಮತ್ತು ನಾಲಗೆಯ ಪಸೆ ಆರಿಹೋಗಿತ್ತು. ತಕ್ಷಣ ಅವನಿಗೆ ನ್ಯಾನಿಯೋ ಅಲ್ಲೇ ಎಲ್ಲೋ ಇರಬೇಕೆಂದು ಜ್ಞಾಪಕವಾಯ್ತು.

"ನ್ಯಾನಿಯೋ, ನ್ಯಾನಿಯೋ, ಒಸಿ ನೀರ್ತಕ್ಕಬಾ ಕಂದಾ"

ಇಷ್ಟು ಹೊತ್ತೂ ಸ್ತಬ್ಧವಾದ ಮೌನದಲ್ಲಿ ಎಲ್ಲವನ್ನೂ ನಿಂತು ನೋಡುತ್ತಿದ್ದ ನ್ಯಾನಿಯೋ ಗೋಕಲನ ಕರುಣಾಜನಕ ದನಿ ಕೇಳಿ ತಕ್ಷಣ ಎಚ್ಚೆತ್ತುಕೊಂಡ. ಇಂತಹ ನೋವು ಮತ್ತು ಸಂಕಟಗಳಿಗೆ ಇದೇ ಮೊದಲ ಬಾರಿ ಸಾಕ್ಷಿಯಾಗಿದ್ದುದರಿಂದ ಅವನಿಗೆ ಏನು ನಡೆಯಿತೋ ಒಂದೂ ಅರ್ಥವಾಗಿರಲಿಲ್ಲ. ಅವನ ಆಟದ ಬಂಡಿ ಅಂಗಳದಲ್ಲಿ ಅನಾಥವಾಗಿ ಬಿದ್ದಿತ್ತು. ಗೋಕಲನ ದೇಹದಲ್ಲಿನ ನೋವು ಅವನ ಪದಗಳನ್ನು ಅಸ್ಪಷ್ಟವಾಗಿ ಒಂದು ನರಳಿಕೆಯಲ್ಲಿಯೇ ಒಸಕಿ ಹಾಕುತ್ತಿದ್ದುದರಿಂದ ಅವನಿಗೇನು ಬೇಕೆಂಬುದು ನ್ಯಾನಿಯೋನಿಗೆ ಸರಿಯಾಗಿ ತಿಳಿಯುತ್ತಿರಲಿಲ್ಲ.

"ತಾತಾ, ನಾನು ಅಪ್ಪನ್ಕರ್ಕಬತ್ತೀನಿ" ಎಂದವನೇ ನ್ಯಾನಿಯೋ ತನ್ನ ತಂದೆ-ತಾಯಿಗಳು ಕುಯ್ಲು ಮಾಡುತ್ತಿದ್ದ ಗದ್ದೆ ಕಡೆಗೆ ಓಡಿದ. ತನ್ನ ತಾಣಕ್ಕೆ ಮರಳಿದ್ದ ನಾಯಿ ಒಂದು ಪ್ರಜ್ಞಾಪೂರ್ವಕವಾದ ಹೆಜ್ಜೆಯನ್ನು ಮುಂದಿಟ್ಟು ಗೋಕುಲನ ಕಡೆ ವಿಷಾದಭರಿತ ನೋಟವೊಂದನ್ನು ಬೀರಿತು. ತನ್ನ ಬಾಲವನ್ನು ಹಿಂಗಾಲುಗಳ ನಡುವೆ ತುರುಕಿಕೊಂಡು ಗಾಳಿಯನ್ನು ಮೂಸತೊಡಗಿತು.

---

ಎಂ. ಎಸ್. ಶಿವಮೂರ್ತಿ, ಸಂ. ಇ.ಡಬ್ಲ್ಯೂ.ಎಸ್. ೧೧೦೮, ಎರಡನೇ ಹಂತ, ಕೆ.ಹೆಚ್.ಬಿ.
ಕುವೆಂಪು ನಗರ, ಮೈಸೂರು - ೫೭೦ ೦೨೩

# ಮಹೆ ಜಬೀನ್‌ರ ನಾಲ್ಕು ಕವಿತೆಗಳು

ಅನು : **ಚಿದಾನಂದ ಸಾಲಿ**

ಹೈದರಬಾದಿನಲ್ಲಿ ಷೀಸಿಕ್ಸ್ ಎಂಬ ಸಮಾಜಸೇವಾಸಂಸ್ಥೆಯೊಂದನ್ನು ಹುಟ್ಟುಹಾಕಿ ಮಹಿಳೆಯರ ಸ್ಥಿತಿ ಗತಿಯ ಉತ್ತಮೀಕರಣಕ್ಕಾಗಿ ದುಡಿಯುತ್ತಿರುವ ಮಹೆಜಬೀನ್ ಈ ಕಾರಣಕ್ಕಾಗಿ ಹಲವಾರು ರಾಷ್ಟ್ರಮಟ್ಟದ ಮನ್ನಣೆಗಳಿಗೆ ಪಾತ್ರರಾಗಿದ್ದಾರೆ. ೯೦ರ ದಶಕದಲ್ಲಷ್ಟೇ ಬರೆಯಲು ಪ್ರಾರಂಭಿಸಿರುವ ಶ್ರೀಮತಿ ಮಹೆಜಬೀನ್‌ರದು ಸಮಕಾಲೀನ ತೆಲುಗು ಕಾವ್ಯ ಸಂದರ್ಭದ ಅತಿ ಮುಖ್ಯ ಧ್ವನಿಯಾಗಿದೆ. ಇಲ್ಲಿಯ ಕವಿತೆಗಳನ್ನು ಅವರ 'ಎಲೆಯುದುರೂ ಕಾಲ' ಸಂಕಲನದಿಂದ ಆಯ್ದು ಅನುವಾದಿಸಲಾಗಿದೆ.

## ಡಾಟರ್ಸ್ ಕಿಂಗ್‌ಡಂ

ವಾಸ್ತವಾಧೀನ ರೇಖೆಗಳ ದಾಟಿ
ಸ್ತ್ರೀಯರು ದೇಶ-ವಿದೇಶಗಳ ಸರಹದ್ದುಗಳ ಅಳಿಸಿಹಾಕಿದ್ದಾರೆ
ಅನಾದಿಕಾಲದಿಂದ ಭಾರ ಹೊತ್ತಿರುವ ಭೂಮಿ
ಈ ನಡುವೆ ಮಾತು ಕಲಿತುಕೊಂಡಿದೆ.
ಅದರ ಮೇಲೆ ಹುಟ್ಟಿ ಬೆಳೆದ ಸ್ತ್ರೀಯರು
ಈಗೀಗ ಪ್ರಶ್ನೆ ಕೇಳುತ್ತಿದ್ದಾರೆ
ಭೂಮ್ಯಾಕಾಶಗಳ ಒಂದು ಮಾಡಿದ ಸ್ತ್ರೀ-ವಾದ
ಸಾವಿರಾರು ಧ್ವನಿಗಳಿಗೆ ಶಕ್ತಿ ನೀಡಿದೆ.

ದೇಹಗಳ ಸುತ್ತ ಮುತ್ತಿಕೊಂಡ ವ್ಯೂಹ
ಬದುಕುಗಳ ಸುತ್ತ ಮೆತ್ತಿಕೊಂಡ ಮಿಥ್
ಎಲ್ಲ ಕಳಚಿಕೊಳ್ಳುತಿವೆ ಒಂದೊಂದಾಗಿ.
ಕುಟುಂಬವ್ಯಾಮೋಹ ಕರಗಿಹೋದ ಮೇಲೆ
ಪ್ರಪಂಚವೀಗ ಮತ್ತಷ್ಟು ವಿಶಾಲ.

ಅನೇಕಾನೇಕ ಭಾಷೆಗಳು
ಅನೇಕ ಬಣ್ಣಗಳ ದೇಹಗಳು
ನೋವೊಂದೇ.

ಬಿಡಿ; ಇದೆಲ್ಲ ಸೂರ್ಯಾಸ್ತದ ಮಾತಾಯಿತು
ಆ ಬರ್ತ್ತಿರೋ ಸೂರ್ಯೋದಯ ನಮ್ಮದೇ.
ಆ ಸುಪ್ರಭಾತವೂ ನಮ್ಮದೇ.
ಇನ್ನು ಭೂಮಿ ಮೇಲೆ ವಿಸ್ತರಿಸುವ
ನಾಗರಿಕತೆ ಅದೂ ಕೂಡ ನಿಶ್ಚಯವಾಗಿ ನಮ್ಮದೇ.

ಹೊಸ ಇತಿಹಾಸ ಬರೆಯುತಿಹ
ನಮ್ಮ ಕೈಗಳ ನೋಡಿ
ನಮಗೇ ಹೆಮ್ಮೆಯಾಗುತಿದೆ
ನಿಸ್ಸಂದೇಹವಾಗಿ
ಗಂಡಸರ ಬುನಾದಿಗಳು ಅದುರುತ್ತಿವೆ.

## ಸ್ಟ್ರೀಟ್ ಚಿಲ್ಡ್ರನ್

ಅನೇಕಾನೇಕ ಸಂಕಟಗಳು
ಜೀವನವ ಹಿಂಡಿ ಹಿಪ್ಪೆ ಮಾಡಿರುವಾಗ
ಬದುಕುವುದೇ ಕೊನೆಯ ಸಮಸ್ಯೆ.
ಯಾರಿಗೆ ಯಾರೂ ಏನೂ ಆಗದಿರುವಾಗ
ಸ್ವಂತ ರಕ್ತದಲೆ ಪರಕೀಯತೆ.

ತಿಪ್ಪೆಗುಂಡಿ ಮೇಲೆ ಹಾಸಿಕೊಂಡ
ಶಾಪಗ್ರಸ್ಥ ಬಾಲ್ಯ-ಬೀದಿಮಕ್ಕಳು
ಬದುಕನ್ನು ಹುಡುಕಿಕೊಳ್ಳಲು
ಸೂರ್ಯೋದಯಕ್ಕೆ ಸಲಾಂ ಹೊಡೆದು
ಅವರು ಹೊರಡುತ್ತಾರೆ-
ಹೆಗಲಚೀಲದಲಿ ಬದುಕಭಾರ ಹೊರುತ್ತ.

ಅಕ್ಷರಗಳ ತಿದ್ದಬೇಕಾದ ಬಾಲ್ಯ
ರದ್ದಿ ಪೇಪರಿನಲಿ ಸಿಕ್ಕಿಕೊಂಡಿದೆ
ಹಾಲು ಕುಡಿಯಬೇಕಾದ ಪಸುಳೆಯ ಶೈಶವ್ಯ
ಹಾಲಿನ ಕವರುಗಳ ಬೇಟೆಯಲಿ ಕೈಜಾರಿ ಹೋಗಿದೆ.
ಯಾವ ಅಮಾವಾಸ್ಯೆ ಅವರ ಬೀದಿಪಾಲು ಮಾಡಿಹಾಕಿತೋ?

ಬಿಸಿಲೇನು? ಮಳೆಯೇನು?
ಚಳಿಯೇನು....ಸೆಕೆಯೇನು?
ಹಗಲೇನು....ರಾತ್ರಿಯೇನು?
ಕಾಲದ ಪರಿವೇ ಇಲ್ಲ
ಕೇಳುವವರೂ ಯಾರೂ ಇಲ್ಲ.

ಕೇವಲ ಬದುಕಲಿಕ್ಕಾಗಿ
ಎಷ್ಟೊಂದು ಯುದ್ಧಗಳ ಮಾಡುತ್ತಾರವರು
ಎಷ್ಟು ಸಲ ಗಾಯಗೊಳ್ಳುತ್ತಾರೆ ಗೊತ್ತಾ?
ತಿಪ್ಪೆಗುಂಡಿಯಿಂದ ವಸ್ತುಗಳ ಹೊರತೆಗೆದು
ಪ್ರೀತಿಯಿಂದ ಚೀಲದಲಿ ಹಾಕಿಕೊಳ್ಳುತಿರುವ
ಅವರ ನೋಡುತ್ತಿದ್ದರೆ
ಪ್ರಾಚ್ಯವಸ್ತು ಸಂಶೋಧಕರು ನೆನಪಾಗುತ್ತಾರೆ

ಅವರು ನಡೆಯುತ್ತಿದ್ದರೆ
ಆತ್ಮಸ್ಥೈರ್ಯವೇ ಸಾಕಾರವಾದಂತೆ ಭಾಸವಾಗುತ್ತದೆ.

## ಸರಹದ್ದು ರೇಖೆಗಳು

ಅಲ್ಲಿ..... ಬದುಕು ಘಾಸಿಗೊಳಿಸಿದ ಪಕ್ಷಿಗಳೆಲ್ಲ
ಬಡತನದ ಮೂಟೆಗಟ್ಟಿಕೊಂಡು ಬಂದು ಕೂಡುತ್ತಿವೆ.
ನೋವು-ನಿರಾಶೆಗಳು ಒಂದೇ ಸಮ ಕಿರಚುತ್ತಿವೆ.
ಬಾಯಿ ಮೂಕವಾದರೆ ಕಣ್ಣು ಮಾತನಾಡುತ್ತವೆ
ಬದುಕಿನೀ ನಿರಂತರ ಶೋಕಗೀತೆಯಲಿ
ಜಾರಿದ ಸೆರಗು, ಹರಿದ ಸೀರೆ
ಹಿನ್ನೆಲೆ ಸಂಗೀತವಾಗಿ ಮಿಡಿಯುತಿವೆ
ಯೌವನೀಕೃತ ಬಾಲ್ಯ
ಅರಳುತ್ತ ಮಾಡುವ ಸದ್ದಿಗೆ
ಮೊಗ್ಗುಗಳು ವಿಪ್ಲವವಾಗಿ ಉದುರುತ್ತಿವೆ.

ಕನಸುಗಳು ಹೊತ್ತಿ ಉರಿಯುತಿಹ ದೃಶ್ಯ
ದಾರುಣವಾಗಿ ಹೃದಯವ ತಾಕುತ್ತಿದೆ
ಹಣಕ್ಕೆರವಾದ ದೇಹದಲಿ
ಇಂಗಿಹೋಗುವ ಏಕಾಂಗಿ ಕಣ್ಣೀರ ಚುಕ್ಕಿಗಳು
ಸಮಾಜಕ್ಕೆ ಸವಾಲ್ ಹಾಕುತ್ತಿವೆ.

ಅಲ್ಲಿ
ತಲತಲಾಂತರಗಳ ವಿಲಾಸದಿತಿಹಾಸ
ಉಳಿಸಿದ ಸಾಮಾಜಿಕ ಅವಶೇಷಗಳು
ನಮ್ಮನ್ನು ತಲೆಎತ್ತದಂತೆ ಮಾಡುತ್ತಿವೆ
'ಮೆಹಂದಿ'*ಯ ಶಿಥಿಲಾಸ್ಥಿಪಂಜರಗಳು
ಸರಹದ್ದು ರೇಖೆಗಳ ಬರೆಯುತ್ತಿವೆ.

* ಮೆಹಂದಿ ಹೈದ್ರಾಬಾದಿನ ಕುಖ್ಯಾತ ಕೆಂಪುದೀಪ ಪ್ರದೇಶ

## ಅಜ್ಞಬಿ

ನಿನ್ನ ನನ್ನ ಕಥೆ ಒಂದೇ
ನಿನ್ನ ನನ್ನ ಅಮ್ಮಂದಿರ ಕಣ್ಣೀರಗಾಥೆ ಒಂದೇ
ನಿನ್ನ ನನ್ನ ಅಪ್ಪಂದಿರ ಅನುಭವಗಳ ಸಾರ ಒಂದೇ
ನಾವು ಅಮ್ಮನ ಮಕ್ಕಳು
ಪಿತೃಸ್ವಾಮ್ಯ ವಾರಸುದಾರಿಕೆಯ ರಕ್ತಸಂಬಂಧಿಗಳು

ಒಂದೇ ವ್ಯತ್ಯಾಸ
ನನ್ನ ನಿನ್ನ ನೋವುಗಳ ನಡುವೆ
ಜೆಂಡರ್ ರಾಜ್ಯ ಆಳುತಿದೆ
ನಾನು ಅಪ್ಪನ ನೇಪಥ್ಯವ
ಮೌನವಾಗಿ ಸಹಿಸಿದವಳು
ನನ್ನ ಮಗನ ತಂದೆಯ ಪ್ರೇಮರಾಹಿತ್ಯವ
ಭಾರವಾಗಿ ಹೊರುತ್ತಿರುವವಳು
ಅಂದವಾದ ಅಮ್ಮನ ದೇಹದ ಮೇಲೆ
ಕ್ರೂರಿಯೌವನದ ಕುಣಿತ ನೋಡಿದವಳು
ಬೆಳದಿಂಗಳು ಪ್ರವಹಿಸುವ ಆಕೆಯ ಹೃದಯದ ಮೇಲೆ
ಅಪ್ಪ ಮಾಡಿದ ಗಾಯಗಳ ನೋಡಿದವಳು

ಸುದೀರ್ಘವಾದ ಚಳಿರಾತ್ರಿಗಳಲಿ
ಅಮ್ಮ ರಗ್ಗಿನಂತೆ ಆವರಿಸಿಕೊಳ್ಳೋಳು
ನಡುರಾತ್ರಿ ಎಚ್ಚರಾಗಿ
ದೆವ್ವದ ಕಥೆಗಳು ನೆನಪಾಗಿ ನಡುಕವುಂಟಾದಾಗ
ಕೈಗೆ ನಿಲುಕುತ್ತಿದ್ದುದು ಅಮ್ಮ ಮಾತ್ರ.
ಅನುಭವಗಳು-ಅನುಭೂತಿಗಳ ನಡುವೆ

ಅಪ್ಪನ ನೆರಳು ಎಲ್ಲೆಲ್ಲೂ ಇಲ್ಲ.

ಕಮ್ಮನೆಯ ನಮ್ಮ ಬಾಲ್ಯ
ರೂಪುಗೊಂಡಿದ್ದು ಅಮ್ಮನ ರೆಕ್ಕೆಗಳಡಿಯಲ್ಲೇ.

ಅಪ್ಪನ ನೋಡಿದರೆ
ಅಪರಿಚಿತನ ನೋಡಿದ ಹಾಗಾಗುತ್ತದೆ.
ನಮ್ಮದು ರಕ್ತಸಂಬಂಧ ಮಾತ್ರ;
ಪ್ರೀತಿ ಸಂಬಂಧ ಒಂದಿನಿತೂ ಇಲ್ಲ

. . .

ನನಗೆ ಕ್ರೋಮೋಸೋಮುಗಳ ಕೊಟ್ಟವನೇ....
ಜೊತೆಗೆ ಬೊಗಸೆ ಪ್ರೀತಿಯನೂ ಕೊಟ್ಟಿದ್ದರೆ
ಇಂದು ನಿನ್ನ ವೃದ್ಧಾಪ್ಯವ
ನನ್ನ ಭುಜಗಳ ಮೇಲೆ ಹೊರುತ್ತಿದ್ದೆನಲ್ಲ.

---

ಚಿದಾನಂದ ಸಾಲಿ, ಸಿರಿವಾರ - ೫೮೪೧೨೯, ರಾಯಚೂರು ಜಿಲ್ಲೆ
Mahejabeen, 10-2-289/72, Shanthinagar, Masab tank
Hyderbad-500028
Andra Pradesh. ph: 91403319240/3303862.

# ನನ್ನ ತಾಯಿ

ಮೂಲ : ಡಾ. ಎ. ಪಿ. ಜೆ. ಅಬ್ದುಲ್ ಕಲಾಂ
ಅನು : ರಾಧಾ ಶಾಮರಾವ

ಕಡಲಲೆಗಳು, ಹೊನ್ನಮರಳು
ಯಾತ್ರಿಕರ ಭಾವುಕತೆ, ರಾಮೇಶ್ವರದ ಮಶೀದಿ ದಾರಿ
ಈ ಎಲ್ಲವೂ ಮೇಳೈಸಿ
ಏಕಾತ್ಮ ನನ್ನ ತಾಯಿ
ತಾಯೆ ನೀ ನನ್ನೆಡೆಗೆ ಬರುತ್ತಿ
ಸ್ವರ್ಗದ ಮಮತೆಯ ಹಸ್ತವಾಗಿ
ನೆನಪಿದೆ ನನಗೆ, ಕರ್ಮ ಯುದ್ಧದ ದಿನಗಳವು
ಜೀವನವೇ ಕಷ್ಟಗಳ ಆಹ್ವಾನ
ಬ್ರಾಹ್ಮಿಮೂಹೂರ್ತದಲ್ಲೇ ಮೈಲಾನುಗಟ್ಟಲೇ
ಕಾಲ್ನಡಿಗೆ ಪಯಣ
ದೇವಸ್ಥಾನದ ಪತ್ತಿರ ಗುರುವಿನ ಪತ್ತಿರ ಪಾಠ ಮತ್ತೆ ಓಟ
ಇನ್ನೊಂದು ಶಾಲೆಗೆ
ಅರಬೀ ಕಲಿಯುವುದಕೆ, ನಂತರ
ಮರಳುಗುಡ್ಡಗಳ ದಾಟಿ ಮತ್ತೆ ರೇಲ್ವೆ ನಿಲ್ದಾಣಕೆ
ದಿನಪತ್ರಿಕೆಗಳ ಕಟ್ಟುಗಳ ಹೊತ್ತು ಓಟ
ಮಂದಿರದ ಊರಲ್ಲಿ, ಪತ್ರಿಕೆಗಳ
ಹಂಚುವದು, ಜನಜಂಗುಳಿಯಲ್ಲಿ
ಆ ನಂತರ ರವಿ ಉದಯ, ಆಗ ಓಟ ಶಾಲೆಯೆಡೆಗೆ
ಸಾಯಂಕಾಲ ಮತ್ತೆ ಉದ್ಯೋಗ

ರಾತ್ರಿ ಇಡೀ ಓದು, ಅಭ್ಯಾಸ
ಈ ಚಿಕ್ಕ ಬಾಲಕನಿಗೆ ಎಷ್ಟೊಂದು ವೇದನೆಗಳು!
ಆದರೆ ತಾಯೆ ಈ ಎಲ್ಲ ವೇದನೆಗಳ
ಆತ್ಮಶಕ್ತಿಯಲ್ಲಿ ನೀ ರೂಪಾಂತರಿಸಿದೆ
ಭಗವಂತನ ಪಾದದಡಿಯಲ್ಲಿ ಅಡಿಗಡಿಗೆ
ನತಮಸ್ತಕರನ್ನಾಗಿಸಿದೆ
ಅವನ ಅನುಗ್ರಹಿಕೆ
ನಿನ್ನ ಬಲಯುತ ನಿಷ್ಠೆ, ಈ ನಿನ್ನ ಬಾಲಕನ ಶಕ್ತಿ
ಎಲ್ಲರ ಅಗತ್ಯಗಳನರಿತು ನೀ ನೀಡಿದೆ
ಈ ಹತ್ತು ವರ್ಷದ ಬಾಲಕನ
ಮಡಿಲಲ್ಲಿಟ್ಟು ತಂಪೆರೆದೆ
ಆ ಬೆಳದಿಂಗಳ ರಾತ್ರಿ
ನನ್ನ ವಿಶ್ವವನ್ನು ನೀ ಮಾತ್ರ ತಿಳಿದೆ.
ನನ್ನ ವೇದನೆ ನೋವ, ನಿನ್ನ ಕಂಬನಿಗಳ
ಸಾಂತ್ವನ ಸ್ಪರ್ಶದಿ ಶಮನ ಮಾಡಿದೆ
ನಿನ್ನ ಪ್ರೀತಿ, ಜಾಗ್ರತೆ, ನಂಬಿಕೆಗಳಿಂದಲೇ
ನನ್ನ ಶಕ್ತಿಯಾದೆ
ಜಗವ ನಿರ್ಭೀತಿಯಿಂದ
ಎದುರುಗೊಳ್ಳಲು
ಈ ಶಕ್ತಿಯ ಜೊತೆಗೂಡಿ
ಮಿಲನ ತಾಯೆ ಮತ್ತೆ ಆ ದಿನ
ಪುನಃ ಪುನಃ ಸೇರಿ

ರಾಷ್ಟ್ರಪತಿಗಳಾದ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಆಜಾದರ
' Wings of Fire' ಎಂಬ ಆತ್ಮಚರಿತ್ರೆಯಲ್ಲಿನ
' My mother' ಎಂಬ ಕವಿತೆಯ ಭಾವಾನುವಾದವಿದು.

## ಹಾಲ್ಸಾ

ಓಹ್! ಎಂತಹ ಚಂದದ ಮೀನು
ಹಾಲ್ಸಾ!!
ಎಲ್ಲಿಂದ ತಂದಿ ರಾಜನ್!!
ತಂದಿದ್ದೆ? ಹಂ ಶ್ರಮಪಟ್ಟು
ಹಿಡಿಸಿ ತರಿಸಿದ್ದು ರಾಣಾನಿಂದ

ಹೇಳಿಲ್ಲವೆ ನಿನಗೆ ಸೆಪ್ಟೆಂಬರ್‌ನಿಂದ
ಈ ಐದು ತಿಂಗಳು ಮೀನು
ತರೋಹಾಗಿಲ್ಲಂತ?
ಅದೇಕೆ? ಏಕೆ ರಾಣಿ?
ದಿನಗಳವು ಮೀನು ಗರ್ಭಧಾರಣೆಗೆ,
ಓಹ್! ಇದು ಹಾಗೇನೂ ಇರಲಿಕ್ಕಿಲ್ಲ ಬಿಡು.
ಮಾಡಿ ಬಿಡು ಇದೊಮ್ಮೆ ಈ ಮೀನಿನ ಸಾರು
ಮತ್ತಿಲ್ಲ, ಇನ್ನೈದು ತಿಂಗಳು

ಟಿ. ವಿ. ಪರದೆಯ ವಾರ್ತೆ
ಅಡಿಗೆ ಮನೆಗೂ ಕೇಳುತ್ತಿತ್ತು
ಗರ್ಭವತಿ ಮಹಿಳೆಯ ಮೇಲೆ
ನಾಲ್ಕು ಪುರುಷರ ಅತ್ಯಾಚಾರ!!
ಮಹಿಳೆ ನೆತ್ತರದ ಮಡುವಿನಲ್ಲಿ !!!

ಪರಾತದ ನೀರಲ್ಲಿ ಮೀನು
ಮಿಂಚುತ್ತಿತ್ತು
ಅಬ್ಬಾ!! ಕಣ್ಣುಗಳಂತೂ,
ಏನೋ ಹೇಳುತ್ತಿರುವಂತೆ!
ಹೊರಗಿನಿಂದ ರಾಜನನ ಕೂಗು
'ರಾಣಿ ಆಯಿತೇ ಬೇಗ ಮಾಡು"

ಒಡನೇ ಕತ್ತರಿಸಿದಳು
ಮೂರು ಭಾಗವಾಗಿ
ತಲೆಭಾಗ, ಕೊನೆಭಾಗ
ಹೊಟ್ಟೆ ಸೀಳಿದಳು, ಚೀತ್ಕರಿಸಿದಳು
'ರಾಜಾ ಮೀನು ಗರ್ಭವತಿ'

**ಗುಲ್ಜಾರರ ಹಿಂದಿ ಕಥೆ 'ಹಾಲ್ಸಾ'ವನ್ನು ಆಧರಿಸಿ ರಾಧಾ ಶಾಮರಾವ್‌ರವರು ರಚಿಸಿರುವ ಕವಿತೆಯಿದು – ಸಂ.**

---

ರಾಧಾ ಶಾಮಾರಾವ, "ರಾಧೇಶಾಮ", ಸಾರಸ್ವತಪೂರ, ಧಾರವಾಡ-೨

# ಪ್ರೀತಿ (ಅನುಭವ ಕಥನ)

ಮೂಲ : ಗೈ ದೆ ಮುಪ್ಪಾಸಂಟ್
ಅನು : ಉಷಾ. ಜೆ.

ನಾನೊಬ್ಬ ಸರಳ ಜೀವಿ. ನಾನು ಹಳ್ಳಿಯಲ್ಲಿ ಹುಟ್ಟಿದವನು. ಸಹಜವಾಗಿಯೇ ಈ ಭೂಮಿ, ಶುದ್ಧಗಾಳಿ, ಪ್ರಾಣಿಗಳು, ಬಿರುಗಾಳಿ, ಆಕಾಶ ಮತ್ತು ಪ್ರಕೃತಿಯನ್ನು ತುಂಬಾ ಪ್ರೀತಿಸುತ್ತೇನೆ. ಶಿಕಾರಿ ಎಂದರೆ ನನಗೆ ಒಂದು ಕಾಲದಲ್ಲಿ ತುಂಬಾ ಅಚ್ಚುಮೆಚ್ಚಿನ, ಮೋಜಿನ ಚಟುವಟಿಕೆಯಾಗಿತ್ತು. ಶಿಕಾರಿಯಾದ ಹಕ್ಕಿಯ ದೀನಸ್ಥಿತಿ, ನೋವು ಕೊಡುತ್ತಿದ್ದ ಗಾಯ, ಅದರ ರೆಕ್ಕೆ, ಪುಕ್ಕದ ಮೇಲೆಲ್ಲಾ ಹರಡಿದ ಕೆಂಪು ರಕ್ತ-ಇಂಥಾ ಒಂದು ಹೃದಯ ವಿದ್ರಾವಕ ಸನ್ನಿವೇಶದಿಂದಲೇ ನಾನು ಶಿಕಾರಿ ಮಾಡುವುದನ್ನು ಸಂಪೂರ್ಣ ಕೈ ಬಿಟ್ಟೆ.

ಆ ವರ್ಷ ಶರತ್ಕಾಲ ಮುಗಿದಿತ್ತು. ಚಳಿ ಆಗಲೇ ಪ್ರಾರಂಭವಾಗಿತ್ತು. ನನ್ನ ಚಿಕ್ಕಪ್ಪನ ಮಗ ಕಾರ್ಲ್ ಕಾಡುಕೋಳಿ ಶಿಕಾರಿಗೆ ಕರೆದ. ನಮ್ಮ ಕಾರ್ಯಕ್ರಮವನ್ನು ಮೊದಲೇ ಯೋಜಿಸಿ, ಶಿಕಾರಿ ಮುಗಿಸಿ ಸಂಜೆಯೇ ವಾಪಾಸಾಗುವುದು ಒಳ್ಳೆಯದೆಂದು ನಿರ್ಧರಿಸಿದೆವು. ನಾನು ಅವನ ಜೊತೆ ಶಿಕಾರಿಗೆ ಹೋಗಲಿದ್ದುದರಿಂದ, ಅವನ ಮನೆಯಲ್ಲೇ ಆದಿನ ರಾತ್ರಿ ಠಿಕಾಣಿ ಹೂಡಲು ಹೊರಟೆ.

ನನ್ನ ದಾಯಾದಿ ಕಟ್ಟುಮಸ್ತಾದ ಬಲಿಷ್ಠವಾದ ಆಳು. ಅವನ ಸಂಪೂರ್ಣ ಹೆಸರು "ಕಾರ್ಲ್ ದೆ ರಾನ್‌ವಿಲ್" ಎಂದು. ಉಲ್ಲಾಸದಿಂದ ಕೂಡಿದ ಕೆಂಪು ಮುಖ. ಅವನು ಸಹಜವಾಗಿ ಒಳ್ಳೆಯವನು. ಅವನ ದೊಡ್ಡ ಕೋಟೆಮನೆ ಸುಂದರವಾದ ಒಂದು ಕಣಿವೆಯಲ್ಲಿ ನೆಲೆಸಿತ್ತು. ಅರ್ಧ ಭಾಗ ಹೊಲಮನೆ ಮಾಡಿಕೊಂಡಿದ್ದರು, ಉಳಿದ ಕೋಟೆ ಹಾಗೇ ಇತ್ತು. ಅದರ ಅಕ್ಕ, ಪಕ್ಕ ಎಲ್ಲಾ ಸಂಪೂರ್ಣವಾದ ಕಾಡು. ಅಲ್ಲಿ ಬೃಹದಾಕಾರದ ಮರಗಳು, ಸಣ್ಣ, ಸಣ್ಣ ಹಕ್ಕಿಗಳಿಂದ ಹಿಡಿದು ಎಲ್ಲಾ ರೀತಿಯ ಅಪರೂಪದ ಹಕ್ಕಿಗಳಿವೆ. ಅಲ್ಲಿನ ನಿರ್ಜನ ಮೌನದಲ್ಲಿ ಹರಿಯುವ ತಣ್ಣಗಿನ ತೊರೆಯಲ್ಲಿ ಮೀನುಗಳು ನಮ್ಮ ಗಾಳಕ್ಕೆ ಸುಲಭವಾಗಿ ಸಿಗುತ್ತಿದ್ದವು. ನಮ್ಮ ಬಂದೂಕಿನ ಗುರಿಗೆ ಹಕ್ಕಿಗಳೂ ಅಲ್ಲದೆ, ಹದ್ದುಗಳು ಕೂಡ ಉರುಳುತ್ತಿದ್ದವು. ಜವುಗುಗಳು ಸುಂದರವಾದ ಆ

ನಿರ್ಜನ ಪ್ರದೇಶದ ಆಳವಾದ ಮೌನದಲ್ಲಿ ನೆಲೆಸಿವೆ. ಜವುಗುಗಳಲ್ಲಿ ಕಾಡುಕೋಳಿ ಮತ್ತು ಮೀನುಗಳನ್ನು ಹಿಡಿಯುವ ಸಲುವಾಗಿ ದೋಣಿಯನ್ನು ಸಾಗಿಸಲು ಒಂದು ಸಾಗಣೆ ರೀತಿ ವ್ಯವಸ್ಥೆಯನ್ನು ನಿರ್ಮಿಸಿದ್ದರು. ಪ್ರಶಾಂತವಾದ ನೀರಿನಲ್ಲಿ ದೋಣಿಗಳು ಸಂಚರಿಸುತ್ತಿದ್ದ ಹಾಗೆ ಮೀನುಗಳನ್ನು ಕಾಡುಕೋಳಿಗಳನ್ನು ಹಿಡಿಯುತ್ತಿದ್ದರು.

ಆ ಸಂಜೆ ಕೊರೆಯುವ ಚಳಿಯಿತ್ತು. ಆ ಚಳಿಯಲ್ಲೇ ನಡುಗುತ್ತಾ ಕಾರ್ಲ್ ಮನೆಗೆ ಪಾದ ಬೆಳೆಸಿದೆ. ಆ ರಾತ್ರಿ ವಿಶಾಲವಾದ ಊಟದ ಕೋಣೆಯಲ್ಲಿ ನಮ್ಮ ಊಟ ಮುಗಿಯಿತು. ಆ ರೂಮಿನ ಗೋಡೆಯೆಲ್ಲಾ ನೀರು ಹಕ್ಕಿ, ಗೂಬೆ, ರಣಹದ್ದು, ಡೇಗೆ ಹಾಗು ಎಲ್ಲಾ ರೀತಿಯ ಆಯುಧಗಳಿಂದ ಅಲಂಕೃತವಾಗಿತ್ತು.

ನಾವು ನಮ್ಮ ಸ್ಥಳಕ್ಕೆ ಬೆಳಗಿನ ಜಾವ ಮೂರಕ್ಕೆ ತಲುಪಿ, ಹಕ್ಕಿಗಳಿಗಾಗಿ ಕಾಯಬೇಕಿತ್ತು.

ಕೊರೆಯುವ ಗಾಳಿ ಬೀಸಿದಾಗ ನಮ್ಮನ್ನು ನಾವು ರಕ್ಷಿಸಿಕೊಳ್ಳಲು ಒಂದು ಗುಡಿಸಲನ್ನು ನಿರ್ಮಿಸಿಯಾಗಿತ್ತು.

"ನಾಳೆ ಹೆಚ್ಚು ಮಂಜು ಸುರಿಯುವುದು ಖಂಡಿತ, ಆದ್ದರಿಂದ ಶಿಕಾರಿಯ ನಂತರ ವಾಪಾಸಾಗೋದು ಒಳ್ಳೇದು" ಎಂದು ಕಾರ್ಲ್ ಹೇಳಿದ.

ಅಂದು ಬೆಳಗಿನ ಜಾವ ಮೂರಕ್ಕೆ ಎದ್ದೆವು. ಬೇಗ ತಯಾರಾಗಿ ಹಜಾರಕ್ಕೆ ಬಂದೆವು. ಕಾಫಿ, ಸ್ಯಾಂಡ್‌ವಿಚ್ ಆಗಲೇ ಸಿದ್ಧಪಡಿಸಿಯಾಗಿತ್ತು. ಬಿಸಿ ಬಿಸಿ ಕಾಫಿ ಹೀರಿದೆವು, ಸ್ಯಾಂಡ್‌ವಿಚ್ ತಿಂದು ಮುಗಿಸಿದೆವು. ಬ್ರಾಂದಿಯನ್ನು ತುಪ್ಪಳದ ಕೋಟಿನಲ್ಲಿ ಇಟ್ಟುಕೊಂಡೆವು. ಒಬ್ಬ ಸೇವಕ ಮತ್ತು ನಮ್ಮ ಪ್ಲಂಗರ್ ಮತ್ತು ಪೈರೊಟ್ (ನಾಯಿಗಳು)ಗಳ ಜೊತೆಯಲ್ಲಿ ಹಾದಿಹಿಡಿದೆವು.

ನೆಲವೆಲ್ಲಾ ಒಂದು ರೀತಿಯ ನಿರ್ಜೀವತೆಯಿಂದ ಕೂಡಿತ್ತು. ಚಳಿಯಿಂದ ನನ್ನ ಮೂಳೆಯೆಲ್ಲಾ ಕೊರೆಯಲು ಪ್ರಾರಂಭವಾಯಿತು. ಕೊರೆಯುವ ಗಾಳಿಯನ್ನು ಉಸಿರಾಡುವುದೇ ಕಷ್ಟವಾಯಿತು. ಕಾಡಿನಲ್ಲಿ ನಿಸ್ತೇಜವಾದ ಚಂದ್ರನ ಬೆಳಕಿತ್ತು. ನಾಯಿಗಳು ಉಸಿರಾಡಿದಾಗ ಒಂದು ರೀತಿಯ ಹೊಗೆ ರೂಪುಗೊಳ್ಳುತ್ತಿತ್ತು. ಕಾರ್ಲ್ ಮತ್ತು ನಾನು ತಲೆ ತಗ್ಗಿಸಿದ್ದೆವು. ನಮ್ಮ ಕೈಗಳು ಜೇಬಿನಲ್ಲಿ ಬೆಚ್ಚಗಿದ್ದವು. ಬಂದೂಕುಗಳು ತೋಳಿನಲ್ಲಿ ನೇತಾಡುತ್ತಿದ್ದವು. ಆ ನಿರ್ಜನವಾದ ಕಾಡಿನಹಾದಿಯಲ್ಲಿ ಇಬ್ಬರು ಜೊತೆ ಜೊತೆಯಲ್ಲಿ ಮೌನವಾಗಿ ಹೆಜ್ಜೆ ಬೆಳೆಸಿದೆವು.

ಸ್ವಲ್ಪ ಸಮಯದ ಮೌನ ನಡಿಗೆಯ ನಂತರ ಜವುಗನ್ನು ತಲುಪಿದೆವು. ಚಳಿಯನ್ನು ತಾಳಲಾರದೆ ಅಲ್ಲೇ ಮೊದಲು ನಿರ್ಮಿಸಿದ್ದ ಗುಡಿಸಿಲಿಗೆ ನುಗ್ಗಿದೆವು. ಹಕ್ಕಿಗಳು ಎಚ್ಚರಗೊಳ್ಳಲು ಒಂದು ಗಂಟೆ ಕಾಯಬೇಕಿತ್ತು. ನಾನು ಮುದುಡಿಕುಳಿತು ಬೆಚ್ಚಗಾಗಿಸಿಕೊಳ್ಳಲು ಪ್ರಯತ್ನಿಸಿದೆ. ಕೆಮ್ಮು ಪ್ರಾರಂಭವಾಯಿತು. ಕಾರ್ಲ್ ನನ್ನ ವಿಪರೀತವಾದ ಕೆಮ್ಮನ್ನು ನೋಡಿ ತಲೆಕೆಡಿಸಿಕೊಂಡಂತೆ ಕಂಡಿತು. ಬೆಂಕಿ ಹಾಕಿಸಿ ಕಾವು ಮಾಡಿ ಬೆಚ್ಚಗಾಗುವಂತೆ ಮಾಡಿದ. ನನಗೆ ಶೀತ ಉಂಟಾಗುವ ಅಪಾಯವಿದ್ದಲ್ಲಿ ಹಕ್ಕಿಗಳ ಶಿಕಾರಿ ಸಾಧ್ಯವಿಲ್ಲ ಎಂದು ಹೇಳಿದ.

ಹಾಗೆ ಕೆಲನಿಮಿಷ ಕಳೆಯಿತು. ಇದ್ದಕ್ಕಿದ್ದ ಹಾಗೆ ಒಂದು ವಿಚಿತ್ರವಾದ ಕೂಗು ನೆತ್ತಿಯನ್ನೇ ಬಡಿದಂತಾಯಿತು. ತಲೆ ಎತ್ತಿದಾಗ ಬೆಂಕಿಯ ಪ್ರಕಾಶದಲ್ಲಿ ಕಾಡು ಹಕ್ಕಿಗಳು ಹೊಳೆದವು. ಬಳಿಕ

ಉಷಃಕಾಲ, ನಿಧಾನವಾಗಿ ಸೂರ್ಯ ಉದಯಿಸುತ್ತಿದ್ದಂತೆ ಕಣಿವೆಯಲ್ಲೆಲ್ಲಾ ಮಿಂಚಿನ ಸಂಚಾರವಾದಂತೆ ಬೆಳಕು ಹರಿಯತೊಡಗಿತ್ತು.

"ಬೆಂಕಿ ಆರಿಸು, ಬೆಳಕಾಗುತ್ತಿದೆ" ಎಂದ ಕಾರ್ಲ್.

ಜವುಗಿನಿಂದೆದ್ದ ಬಾತುಗಳೆಲ್ಲಾ ಸಾಲುಸಾಲಾಗಿ ದಿಗಂತದೆಡೆಗೆ ಹಾರಲು ಪ್ರಾರಂಭಿಸಿದವು.

ಕಾರ್ಲ್ ಬಂದೂಕಿನಿಂದ ಸಿಡಿದಗುಂಡು, ಕಾಡಿನಲ್ಲೆಲ್ಲ ಒಂದು ರೀತಿಯ ಝೇಂಕಾರವನ್ನುಂಟು ಮಾಡಿತು. ನಾಯಿಗಳು ಮುಂದೆ ಓಡಿದವು.

ನಾವು ಬೇಟೆಯನ್ನು ನಮ್ಮ ಬಂದೂಕಿನ ಗುರಿಯಿಂದ ಹೊಡೆದುರುಳಿಸುವುದು, ಪ್ಲಂಗರ್ ಮತ್ತು ಪೈರೊಟ್‌ಗಳು ಓಡುವುದು, ಸತ್ತ ಪಕ್ಕಿಯನ್ನು ಕಚ್ಚಿ ತರುವುದು. ಅವುಗಳು ಓಡಿ ಓಡಿ ಸುಸ್ತು ಹೊಡೆಯುತ್ತಿದ್ದವು. ಆದರೂ ಅವುಗಳ ಕಣ್ಣುಗಳಲ್ಲಿ ಕಾತರ, ಖುಷಿ ಕುಣಿಯುತ್ತಿತ್ತು. ಶಿಕಾರಿಯಲ್ಲಿ ತೀವ್ರವಾಗಿ ಗಾಯಗೊಂಡ ಪಕ್ಕಿಯ ಕಣ್ಣುಗಳು ನನ್ನನ್ನೇ ದಿಟ್ಟಿಸುತ್ತಿದ್ದವು. ನನಗೆ ಒಂದು ರೀತಿಯ ವೇದನೆ ಆಳದಲ್ಲಿ ಚಿಗರೊಡೆಯಿತು.

ಸೂರ್ಯ ಮೂಡಿ ಬೆಳಕನ್ನು ಎಲ್ಲೆಡೆ ಪಸರಿಸಿದ್ದ. ಆ ದಿನ ಪ್ರಕಾಶಮಾನವಾಗಿತ್ತು. ಆಕಾಶವೆಲ್ಲ ಶುಭ್ರವಾಗಿ ನೀಲಿಯಾಗಿ ಸುಂದರವಾಗಿತ್ತು. ನಾವು ಹೊರಡಲು ಅನುವಾದೆವು. ಆಗ ಇದ್ದಕ್ಕಿದ್ದ ಹಾಗೆ ಎರಡು ಪಕ್ಕಿಗಳು ಕತ್ತನ್ನು ಚಾಚಿ, ರೆಕ್ಕೆ ಬಿಡಿಯುತ್ತಾ ಹಾದು ಹೋಗುತ್ತಿದ್ದುದು ಕಂಡಿತು. ನಾನು ಸುಮ್ಮನಿರಲಾರದೆ ತೋರಿಕೆಗೋ ಎಂಬಂತೆ ಠೀವಿಯಿಂದ ಬಂದೂಕು ತೆಗೆದುಕೊಂಡು ಗುಂಡು ಸಿಡಿಸಿದೆ. ಆ ಕ್ಷಣವೇ ಒಂದು ಪಕ್ಕಿ ರಕ್ತದಮಡುವಿನಲ್ಲಿ ಒದ್ದಾಡುತ್ತಾ ನನ್ನ ಕಾಲಬುಡದಲ್ಲಿ ಬಿದ್ದಿತ್ತು.

ಅದು ಟೀಲ್ ಎಂಬ ಬಾತು. ಎದೆಯೆಲ್ಲಾ ಬೆಳ್ಳಿ ಬಣ್ಣದ್ದಾಗಿತ್ತು. ನಾನು ನನ್ನ ಗುರಿಯನ್ನು ಮೆಚ್ಚಿ ತಲೆದೂಗುತ್ತಾ ಆ ಪಕ್ಕಿಯನ್ನು ಪರೀಕ್ಷಿಸುತ್ತಿದ್ದಾಗ, ಒಂದು ಕ್ಷೀಣವಾದ, ಕೀರಲು ದನಿ ಕಿವಿಯನ್ನು ಬಡಿಯಿತು. ಅದರಲ್ಲಿ ಗಾಢವಾದ ನೋವಿತ್ತು. ಹೃದಯ ವಿದ್ರಾವಕವಾಗಿತ್ತು ಆ ದನಿ. ನಂತರ ನನಗೆ ವಸ್ತುಸ್ಥಿತಿ ಗಮನಕ್ಕೆ ಬಂತು. ಗಂಡು ಪಕ್ಕಿಯೊಂದು ಸತ್ತ ತನ್ನ ಸಂಗಾತಿಗಾಗಿ ರೋಧಿಸುತ್ತಾ ಮೇಲೆ ವೃತ್ತಾಕಾರದಲ್ಲಿ ಸುತ್ತುತ್ತಿತ್ತು.

ಕಾರ್ಲ್ ಅದನ್ನು ತನ್ನ ಬಂದೂಕಿಗೆ ಬಲಿಮಾಡಬೇಕೆಂದು ತವಕದಿಂದ ಅದನ್ನೇ ದಿಟ್ಟಿಸುತ್ತಾ ಕೊಲ್ಲಲು ಅನುವಾದ.

"ನೀನು ಕೊಂದಿರೋದು ಹೆಣ್ಣು, ಇನ್ನು ಈ ಗಂಡು ಪಕ್ಕಿ ಅದನ್ನು ಬಿಟ್ಟು ಅಲ್ಲಾಡೋಲ್ಲ" ಎಂದ.

ಅವನ ಹೇಳಿಕೆ ನಿಜವಾಗಿತ್ತು. ಆ ಪಕ್ಕಿ ದಿಕ್ಕು ತೋಚದೆ ರೋಧಿಸುತ್ತಾ ಅಲ್ಲೇ ವೃತ್ತಾಕಾರದಲ್ಲಿ ಸುತ್ತುತ್ತಲೇ ಇತ್ತು. ನಾನು ನನ್ನ ಜೀವಮಾನದಲ್ಲೇ ಇಂತಹ ನೋವಿನ, ಸಂಕಟದ ದನಿಯನ್ನು ಕೇಳಿಯೇ ಇರಲಿಲ್ಲ. ಕಾರ್ಲ್ ತನ್ನ ಬಂದೂಕನ್ನು ಪಕ್ಕಿಯೆಡೆ ಗುರಿಮಾಡಿದ್ದರೂ ಅದು ತನ್ನ ಸಂಗಾತಿಯನ್ನು ಬಿಟ್ಟು ಮುಂದುವರೆಯಲಿಲ್ಲ. ಹಾಗೇ ಸುತ್ತುತ್ತಿತ್ತು.

ನನ್ನ ಕಣ್ಣು ಹಸಿಗೂಡಿದ್ದವು. ಆದರೂ ನನಗೆ ಅದರ ಅರಿವೇ ಇರಲಿಲ್ಲ.

"ಆ ಹಕ್ಕಿಯನ್ನು ಕೆಳಗಿಡು. ಅದು ಬರಲಿ ನೋಡೋಣ" ಎಂದ.

ಅದನ್ನು ನೆಲದ ಮೇಲಿಟ್ಟಾಗ ಆ ಹಕ್ಕಿ ಅಪಾಯವನ್ನು ಲೆಕ್ಕಿಸಲಿಲ್ಲ. ನಿಧಾನವಾಗಿ ತೆವಳುತ್ತಾ, ತೆವಳುತ್ತಾ ದೇಹದ ಬಳಿ ಬಂತು. ಕಾರ್ಲ್ ಹಿಂದು ಮುಂದು ನೋಡದೆ ಗುಂಡು ಸಿಡಿಸಿದ. ರಭಸವಾಗಿ ನುಗ್ಗಿದ ಆ ಗುಂಡು ಅದರ ಎದೆಯನ್ನು ಸೀಳಿದ ಶಬ್ದ ಎಲ್ಲೆಡೆ ಮರ್ಮರಗೊಂಡಿತು.

ಪೈರೊಟ್ ಓಡಿಹೋಗಿ ಕೆಲನಿಮಿಷಗಳಲ್ಲೆ ಅದರ ಮೃತದೇಹವನ್ನು ನನಗೆ ತಲುಪಿಸಿತು.

ಕಾರ್ಲ್ ಚೀಲ ತೆಗೆದ.

ನಾನು ಬೇಡ ಎಂದು ತಲೆ ಅಲ್ಲಾಡಿಸುತ್ತಾ ಅಸಮ್ಮತಿ ಸೂಚಿಸಿದೆ.

"ನೆಲದಲ್ಲಿ ಏನು ಮಾಡ್ತಿದ್ದೀಯ?" ಎಂದ.

ನಾನು ಉತ್ತರಿಸಲಿಲ್ಲ. ನಾನು ನನ್ನ ಕಾರ್ಯವನ್ನು ಹಾಗೇ ಮುಂದುವರಿಸಿದೆ. ಒಂದು ಗುಂಡಿ ತೋಡಿ ಮುಗಿಸಿದೆ.

"ನೀನು ನಾಯಿಗಳನ್ನು ಕರೆದುಕೊಂಡು ಹೋಗು, ನಾನು ಇವುಗಳನ್ನು ಗುಂಡಿಯಲ್ಲಿ ಹೂಳಿ ನಂತರ ಬರುತ್ತೇನೆ. ದಯವಿಟ್ಟು!" ಎಂದೆ.

ಕೆಲವು ಕ್ಷಣ ಹಾಗೆ ನನ್ನನ್ನು ದಿಟ್ಟಿಸುತ್ತಾ ನಿಂತ. ನಂತರ ನಾಯಿಗಳ ಜೊತೆಯಲ್ಲಿ ಸಿಳ್ಳೇ ಹಾಕುತ್ತಾ ಮರೆಯಾದ.

ಜೊಂಡುಹುಲ್ಲುಗಳು ಅವುಗಳ ಮೇಲ್ಮೈಯನ್ನು ಬಳಸಬಹುದು ಎಂದು ಯೋಚಿಸಿದೆ. ನಂತರ ಆ ಕೊರೆಯುವ ಚಳಿಯಲ್ಲಿ, ನೀಲಾಕಾಶದಡಿಯಲ್ಲಿ ಪ್ರಶಾಂತವಾದ ಜವುಗಿನ ಬಳಿ ಅವೆರಡು ಮೃತದೇಹಗಳನ್ನು ಒಂದೇ ಗುಂಡಿಯಲ್ಲಿ ಸಮಾಧಿ ಮಾಡಿದೆ.

●

---

ಉಷಾ ಜಿ. ಶ್ರೀರಂಗ, ಅಪ್ಪರ್ ಹುತ್ತ, ಜಿ. ಜಿ. ರಸ್ತೆ, ಭದ್ರಾವತಿ, ಶಿವಮೊಗ್ಗ ಜಿಲ್ಲೆ.

# ಚರಿತ್ರೆಯ ಕ್ರೌರ್ಯ : ಚೀನೀ ಹೆಣ್ಣುಮಕ್ಕಳ ಪುಟ್ಟ ಪಾದಗಳು

- ಜಿ. ಪಿ. ಶೈಲಜ

ಹೆಣ್ಣುಮಕ್ಕಳ ಪಾದಗಳು ಮೂರಿಂಚಿಗೆ ಉದ್ದ ಬೆಳೆಯದಂತೆ ಅವನ್ನು ಕಟ್ಟಿಹಾಕುವ ಕ್ರೂರ ಪದ್ಧತಿ ಪ್ರಾಚೀನ ಚೀನಾದಲ್ಲಿತ್ತು. ಕ್ರಿ.ಶ. ೯೬೦ರಿಂದ ೧೯೧೧ರವರೆಗಿನ ಸಾವಿರವರ್ಷಗಳ ಚೀನೀ ಸ್ತ್ರೀಯರ ಬದುಕನ್ನು ಯಾತನಾಮಯಗೊಳಿಸಿದ ಕುಖ್ಯಾತಿಯ ಈ ಸಂಪ್ರದಾಯಕ್ಕೆ ಇಂಗ್ಲೀಷಿನಲ್ಲಿ ಫುಟ್ ಬೈಂಡಿಂಗ್ ಎನ್ನುತ್ತಾರೆ. ಹೆಣ್ಣುಮಕ್ಕಳ ಪಾದಗಳನ್ನು ನಾಲ್ಕರಿಂದ ಏಳು ವರ್ಷಗಳ ನಡುವೆ ಬಿಗಿಯುತ್ತಿದ್ದರು.[೧] 'ಪಾದಗಳು ಮೂರಿಂಚಿಗೆ ಕುಗ್ಗಬೇಕಾದರೆ ಎರಡು ವರ್ಷಗಳು ಹಿಡಿಯುತ್ತಿದ್ದು ಅಲ್ಲಿವರೆಗೆ ಪಾದಗಳು ಬಿಗಿದೇ ಇರುತ್ತಿದ್ದವು.

ಚೀನೀ ಸ್ತ್ರೀಯರ ಸೌಂದರ್ಯವು ಸುಂದರ ಮುಖಕ್ಕಿಂತ ಪಾದಗಳ ಅಳತೆಯ ಮೇಲೇ ನಿರ್ಧರಿತವಾಗುತ್ತಿತ್ತು. ಪಾದಗಳು ಪುಟ್ಟದಿದ್ದಷ್ಟೂ ಮಾನ್ಯತೆ ಹೆಚ್ಚಾಗುತ್ತಿತ್ತು. ಈಚಿನ ದಿನಗಳಲ್ಲಿ ನೀಳಜಡೆ, ಬಾಗಿದ ಹುಬ್ಬು, ಬಳುಕುವ ನಡು ಸೌಂದರ್ಯದ ಮಾನಕಗಳಾಗಿರುವಂತೆ, ಪುಟ್ಟ ಪಾದಗಳು ಆ ಸಾವಿರ ವರ್ಷದುದ್ದಕ್ಕೂ ಸೌಂದರ್ಯದ ಪ್ರತೀಕವಾಗಿತ್ತು.[೨] ಸಿರಿವಂತ ಚೀನೀ ಮನೆಗಳಲ್ಲಿ ಮೊದಲು ಈ ಪದ್ಧತಿ ಚಾಲ್ತಿಗೆ ಬಂತು. ಮಗಳ ಪುಟ್ಟ ಪಾದಗಳು ಪರೋಕ್ಷವಾಗಿ ಸಿರಿವಂತಿಕೆ ಪ್ರಕಟಗೊಳಿಸುವ ಚಿಹ್ನೆಯಲ್ಲದೆ, ಸಮಾಜದಲ್ಲಿ ಅವರ ಸ್ಥಾನಮಾನ, ಅಂತಸ್ತುಗಳೂ ಹೆಚ್ಚಾಗುತ್ತಿದ್ದವು.

ಮದುವೆ ನಿಗದಿಯ ಅರ್ಹತೆಗಳಲ್ಲಿ ಪುಟ್ಟ ಪಾದಗಳೂ ಸೇರಿಬಿಟ್ಟವು. ವರಿಸಿದ ಹೆಣ್ಣಿನ ಪಾದಗಳು ಪುಟ್ಟವಲ್ಲವೆಂದು ಗೊತ್ತಾದಲ್ಲಿ ಪತಿ ಆಕೆಯನ್ನು ತ್ಯಜಿಸಿಬಿಡುತ್ತಿದ್ದ. ಮಗಳು ಕನ್ಯೆಯಾಗೇ ಉಳಿದಾಳೆಂಬ ಆತಂಕದಿಂದ ಈ ಕಟ್ಟುಪಾಡಿಗೆ ಒಳಪಡಿಸಲೇಬೇಕಾದ ತುರ್ತು ತಾಯಿಯದಾಯಿತು.[೩]

ಸೌಂದರ್ಯದ ಹೆಸರಿನಲ್ಲಿ ಸ್ತ್ರೀಯರ ಸ್ವಾತಂತ್ರ್ಯ ಕಿತ್ತುಕೊಳ್ಳುವ ಹುನ್ನಾರ ಈ ಪಾದಗಳ ಕಟ್ಟುವಿಕೆ ಎಂದು ಹೇಳಲಾಗಿದೆ.[೪] ಕಟ್ಟಿದ ಪಾದಗಳಿಂದ ಓಡಾಡಲಾಗದೆ ಪರಾವಲಂಬಿಯಾದ ಆಕೆಯ ಹತೋಟಿ ಸಾಧ್ಯವಾಯಿತು. ಚೀನಾದಲ್ಲಿ ಆಗ ಪ್ರಚಲಿತವಿದ್ದ ಕನ್‌ಫ್ಯೂಷಿಯಸ್ ಬೋಧನೆ

ಸ್ತ್ರೀಯರ ದಾಸ್ಯ ಮಾನ್ಯಮಾಡಿ, ಪುರುಷರನ್ನು ಮೇಲ್ದರ್ಜೆಗೇರಿಸಿ ದಬ್ಬಾಳಿಕೆಗೆ ಅಂಕಿತವನ್ನೊತ್ತಿದ್ದು ಈ ಸಂಪ್ರದಾಯದ ನೆಲೆಗೆ ಕಾರಣ.

**ಉಗಮ:** ಈ ಪದ್ಧತಿ ಉಗಮಕ್ಕೆ ಖಚಿತ ಕಾರಣ ನಿರ್ಧಾರವಾಗಿಲ್ಲ. ಚೀನೀ ರಾಜಕುಮಾರನೊಬ್ಬನ ಯಾವೋ ನಿಯಾಂಗ್ ಎಂಬ ವೇಶ್ಯೆಯು ನಡೆದಾಡುವಾಗ ನೈದಿಲೆ ದಳಗಳ ಮೇಲೆ ಸೋಕಿಯೂ ಸೋಕದಂತೆ ಹೆಜ್ಜೆಯಿಟ್ಟು ಚಿಮ್ಮುತ್ತಿರುವಳೋ ಎನಿಸಿ, ಅಂದಿನಿಂದ ನೈದಿಲೆ ಹೂವಿನಂಥ ಪಾದಗಳು ಚೀನೀ ಹೆಂಗಸರಿಗೆ ಮೇಲ್ಪಂಕ್ತಿಯಾಗಿದ್ದಲ್ಲದೆ, ಹೂವಿನಂಥ ಪುಟ್ಟ ಪಾದಗಳನ್ನು ಹೊಂದಲು ಪಾದಗಳನ್ನು ಬಿಗಿದು ಕಟ್ಟತೊಡಗಿದರು. ಮತ್ತೊಂದು ಹೇಳಿಕೆ: ಯಾವೋ ನಿಯಾಂಗ್‌ಳಿಗೆ ಹುಣ್ಣಿಮೆ ಚಂದ್ರನಂತೆ ಪಾದಗಳನ್ನು ಮಾರ್ಪಡಿಸಲಿಕ್ಕೆ ಕಟ್ಟಿಹಾಕಲು ಆದೇಶಿಸಲಾಗಿತ್ತು. ಹಾಗೇ ಮುಂದುವರೆದು ಇತರ ಸ್ತ್ರೀಯರೂ ಪಾದಗಳನ್ನು ಮಾರ್ಪಡಿಸಲು ಬಿಗಿದುಕೊಳ್ಳತೊಡಗಿದರು. Chen Hon fen ರಾಜನಿಗೆ[೯] ಆಪ್ತಳಾದ ಉಪಪತ್ನಿಯೊಬ್ಬಳು ರಾಜನ ಖುಷಿಗಾಗಿ ಪಾದಗಳನ್ನು ಹುಣ್ಣಿಮೆ ಚಂದ್ರನಂತೆ ಬದಲಿಸಲು ಬಿಗಿದು ಕಟ್ಟಿದಳು. ಕ್ರಮೇಣ ಇತರ ಸ್ತ್ರೀಯರಲ್ಲಿ ಹರಡಿತು. ಮತ್ತೊಂದು ಐತಿಹ್ಯ: ಮಹಾರಾಣಿಯೊಬ್ಬಳಿಗೆ ಗುಬುಟು ಪಾದಗಳಿದ್ದು ಸಹಾನುಭೂತಿಗಾಗಿ ಇತರ ಹೆಂಗಸರೂ ಪಾದಗಳನ್ನು ಕಟ್ಟಿಕೊಳ್ಳತೊಡಗಿದರು.

ಚೀನೀ ರಾಜಕುಮಾರನೊಬ್ಬ ವೇಶ್ಯೆಯೊಬ್ಬಳ ಪಾದಗಳನ್ನು ಬಿಗಿದು ಕಟ್ಟಿ ನರ್ತಿಸಲು ಬಲವಂತಪಡಿಸುತ್ತಿದ್ದ. ಆತನಿಗೆ ಹೆಂಗಸಿನ ಪುಟ್ಟ ಪಾದಗಳೆಂದರೆ ಕೆಟ್ಟ ಮೋಹ. ಇದು ಮುಂದುವರೆದು ಪ್ರತಿ ಕುಟುಂಬದ ಹೆಣ್ಣುಮಕ್ಕಳು ಪಾದಗಳನ್ನು ಬಿಗಿದು ಪುಟ್ಟದಾಗಿಸಿಕೊಳ್ಳಲಾರಂಭಿಸಿದರು. ಒಟ್ಟಿನಲ್ಲಿ ತಮ್ಮ ರಕ್ಷಣೆ, ಆರ್ಥಿಕ ಭದ್ರತೆ, ರಾಜನನ್ನು ಸಂಪ್ರೀತಗೊಳಿಸಲು ಸ್ತ್ರೀಯರು ಯಾವ ಮಟ್ಟದವರೆಗೆ ತಮ್ಮನ್ನು ಶಿಕ್ಷಿಸಿಕೊಳ್ಳುತ್ತಿದ್ದರೆಂಬುದಕ್ಕೆ ಈ ಪದ್ಧತಿ ಸಾಕ್ಷಿ.[೬]

**ಕಾಲ**

ಚೀನಾದ ಟ್ಯಾಂಗ್ ರಾಜವಂಶದ ಆಳ್ವಿಕೆಯ ಉತ್ತರಾರ್ಧದಲ್ಲಿ (೯೨೩-೯೩೬ ಎ.ಡಿ.) ಆರಂಭವಾದ ಈ ಪದ್ಧತಿ ಸಂಗ್ ಮನೆತನದ[೭] ಆಳ್ವಿಕೆಯಲ್ಲಿ ಮುಂದುವರೆದು ಮಿಂಗ್ (೧೩೬೮-೧೬೪೪) ಹಾಗೂ ಚಿಂಗ್ (೧೬೪೪-೧೯೧೧) ವಂಶಸ್ಥರ ಕಾಲದಲ್ಲಿ ವ್ಯಾಪಕವಾಗಿ ಹರಡಿತು. ಕ್ವಿಂಗ್ ಮನೆತನ ಸ್ಥಾಪಿಸಿದ ಮಂಚೂರಿಯಾಗಳು ನಿಷೇಧಿಸಿದರೂ ೧೯೧೧ರ ಜನಪದ ಕ್ರಾಂತಿವರೆಗೆ ಈ ಪದ್ಧತಿ ಚೀನಾದ್ಯಂತ ಹರಡಿತ್ತು.

ಸಂಗ್ ಆಳ್ವಿಕೆಯಲ್ಲಿದ್ದ, ಪ್ರಸಿದ್ಧ ಕನ್‌ಫ್ಯೂಷಿಯಸ್ ವಿದ್ವಾಂಸ ಛೂ ಹ್ಸಿ (Chu Hsi) ಕೂಡ ದಕ್ಷಿಣ ಫ್ಯುಕಿಯೇನ್ ಪ್ರಾಂತ್ಯದಲ್ಲಿ ಚೀನೀ ಸಂಸ್ಕೃತಿ ಹರಡುವ ಹಾಗೂ ಮಹಿಳೆಯರ ಪ್ರತ್ಯೇಕತೆ ಬೋಧಿಸುವಲ್ಲಿ ಈ ಪದ್ಧತಿ ಹೆಚ್ಚು ಪ್ರಚಲಿತಗೊಳಿಸಲು ಉತ್ಸಾಹಿಯಾಗಿದ್ದ.

Chien Tungyion ಎಂಬ ಚೀನೀ ಬರಹಗಾರ ಈ ಪದ್ಧತಿಯ ಕಲಾಭಿಜ್ಞತೆಯನ್ನು ಒತ್ತಿ ಹೇಳಿದ್ದಾರೆ. ೧೧ನೇ ಶತಮಾನದ ಪೂರ್ವಾರ್ಧದಲ್ಲಿ ಸಂಗ್ ರಾಜ್ಯಭಾರಕ್ಕೆ ಮುನ್ನ ಈ ಪದ್ಧತಿ ಪ್ರಚಲಿತವಿದ್ದುದಕ್ಕೆ Lin Yutang ಬರಹ ಸಾಕ್ಷಿ. ಮಂಚೂ ಆಳ್ವಿಕೆಯ ಫ್ಯಾಂಗ್ ಹ್ಸಿಯೆನ್ ಇಡೀ ಕೃತಿಯನ್ನೇ ಈ ಪದ್ಧತಿಗೆ ಮೀಸಲಿಟ್ಟಿದ್ದಾನೆ. ೧೯ನೇ ಶತಮಾನದ ಚೈನಾ ಕೃತಿಗಳಲ್ಲೂ ಉಲ್ಲೇಖಗಳಿವೆ.

## ಪ್ರಕ್ರಿಯೆ

ನಾಲ್ಕರಿಂದ ಏಳು ವರ್ಷದ ಹೆಣ್ಣುಮಕ್ಕಳ ಪಾದಗಳನ್ನು ಕಟ್ಟುವ ಪ್ರಕ್ರಿಯೆ ಆರಂಭ. ಮೊದಲು ಕಾಲುಗಳನ್ನು ಬಿಸಿನೀರಿನಿಂದ ತೊಳೆದು ಮಸಾಜ್ ಮಾಡಿ ಹೆಬ್ಬೆರಳನ್ನು ಬಿಟ್ಟು ಉಳಿದ ನಾಲ್ಕು ಕಾಲ್ಬೆರಳುಗಳನ್ನು ಕೆಳಭಾಗಕ್ಕೆ ಒತ್ತಿ ನಾಲ್ಕಿಂಚು ಅಗಲ, ಹತ್ತು ಇಂಚು ಉದ್ದ ಬಟ್ಟೆಯಿಂದ ಹಿಮ್ಮಡಿವರೆಗೆ ಬಿಗಿಯುತ್ತಿದ್ದರು. ಇದರಿಂದ ಪಾದವು ಅಗಲ-ಉದ್ದ ಬೆಳೆಯುತ್ತಿರಲಿಲ್ಲ. ಪಾದದ ಕಮಾನಿನಂತಿರುವ ಭಾಗವನ್ನು ತಳಕ್ಕೆ ಬಗ್ಗಿಸಿ ಪ್ರತಿದಿನ ಬಿಗಿಗೊಳಿಸುತ್ತಿದ್ದುದರಿಂದ, ಹೆಬ್ಬೆರಳು, ಹಿಮ್ಮಡಿ ಅಂತರ ಕಡಿಮೆಯಾಗುತ್ತಿತ್ತು. ಶೂಗಳ ಅಳತೆ ಕ್ರಮೇಣ ಚಿಕ್ಕದಾಗಿ, ಟೊಳ್ಳಾಗಿ ಬಗ್ಗುತ್ತಿದ್ದವು.

ಬಟ್ಟೆಯನ್ನೇನೋ ಬಿಗಿಯಬಹುದು. ಆದರೆ ಪಾದಗಳನ್ನು ನಿಭಾಯಿಸುವುದು ತ್ರಾಸದಾಯಕ. ದಿನ ದಿನವೂ ಪಾದಗಳನ್ನು ತೊಳೆದು ಉಗುರುಗಳನ್ನು ಕತ್ತರಿಸಬೇಕಿತ್ತು. ಇಲ್ಲದಿದ್ದಲ್ಲಿ ಅವು ಕಟ್ಟಿನೊಳಗೇ ಮುರಿದುಬಿದ್ದು ಸೋಂಕು (Infection) ಉಂಟಾಗುತ್ತಿತ್ತು. ಬಿಗಿತ ಹೆಚ್ಚಾದರೆ ರಕ್ತಚಲನೆ ನಿಂತು ಮಾಂಸಖಂಡ ಕೊಳೆತು ಗ್ಯಾಂಗ್ರಿನ್‌ನಿಂದ ರಕ್ತ ವಿಷವಾಗುತ್ತಿತ್ತು. ಅಸಾಧ್ಯ ನೋವಿನಿಂದ ಮುಕ್ತಗೊಳಿಸಲು ಪಾದಗಳ ಮಸಾಜ್ ಮಾಡಿ, ಶಾಖ ಕೊಟ್ಟು ಒದ್ದೆಕಟ್ಟು (Cold Compress) ಮಾಡುತ್ತಿದ್ದರು. ಇದು ರಕ್ತ ಪರಿಚಲನೆಯನ್ನು ಸುಗಮಗೊಳಿಸುತ್ತಿತ್ತು. ಕಾಲ್ಬೆರಳುಗಳ ಮೇಲ್ಭಾಗ ಆಣೆಗಳು ಬೆಳೆದು, ಚಾಕುವಿನಿಂದ ಕತ್ತರಿಸುತ್ತಿದ್ದರು. ಹುಡುಗಿಗೆ ಸಣ್ಣ ವಯಸ್ಸಿನಲ್ಲೇ ಪಾದಗಳನ್ನು ಕಟ್ಟದೆ ತಡಮಾಡಿದ್ದಾದರೆ ಯಾತನೆ ಅವರ್ಣನೀಯ.

## ನೋವು

ಚೀನೀ ಗಾದೆಯೊಂದಿದೆ: Every pair of Small feet costs a kang (bath) of tears. ಪಾದಗಳನ್ನು ವರ್ಷಗಟ್ಟಲೆ ಕಟ್ಟುತ್ತಿದ್ದು, ಉಂಟಾಗುತ್ತಿದ್ದ ನೋವು ಸಹಿಸಲಸಾಧ್ಯ. ಅವುಗಳ ರೂಪ ಕೆಟ್ಟುಹೋಗುತ್ತಿತ್ತು. ನಾಲ್ಕೂ ಬೆರಳುಗಳು ಕಂಬಳಿಹುಳುಗಳಂತೆ ಸುರುಳಿ ಸುತ್ತಿ, ಪಾದಗಳು ಬೆಂಕಿಯಲ್ಲಿವೆ ಎನಿಸುತ್ತಿತ್ತು. ಬಿಗಿದ ಬಟ್ಟೆ ಪಾದಗಳ ರಕ್ತದ ಚಲನೆ ತಡೆದು ಕೀವು ತುಂಬಿ ಮಾಂಸಖಂಡ ಕೊಳೆಯುತ್ತಿತ್ತು. ಚಳಿಗಾಲದಲ್ಲಿ ಮರಗಟ್ಟುತ್ತಿದ್ದ ಪಾದಗಳು ಬೇಸಿಗೆಯಲ್ಲಿ ರಕ್ತ ಹಾಗೂ ಕೀವಿನಿಂದಾಗಿ ದುರ್ವಾಸನೆ ಬೀರುತ್ತಿದ್ದವು. ಸೋರುತ್ತಿದ್ದ ರಕ್ತ, ಕೀವನ್ನು ಆಗಾಗ ಒರೆಸಬೇಕಿತ್ತು. ಮಾಂಸಲ ಭಾಗವನ್ನು ತೆಗೆದು ಹಾಕಿದಾಗ ಮಾತ್ರ ಪಾದಗಳು ಚಿಕ್ಕವಾಗಲು ಸಾಧ್ಯವೆಂಬ ನಂಬಿಕೆ. ವಿಕಾರವಾಗಿ ದುರ್ವಾಸನೆ ಬೀರುತ್ತ ವಾಕರಿಕೆ ಬರಿಸುತ್ತಿದ್ದವು. ಗ್ಯಾಂಗ್ರೀನ್ ನಿಂದ ಮರಣವೂ ಸಂಭವಿಸುತ್ತಿತ್ತು. ಬಿಗಿತದಿಂದ ಪಾದಗಳ ಸಹಜಸ್ಥಿತಿಯ ಕಮಾನು (Arch) ಹಾಳಾಗುತ್ತಿತ್ತಲ್ಲದೆ ಕಾಲುಚೀಲಗಳು ಜೋತಾಡುತ್ತಿದ್ದವು. ತುಟಿಕಚ್ಚಿ ನೋವು ಅನುಭವಿಸುತ್ತಾ, ನೀರು ಹೊರುವುದು, ಮೆಟ್ಟಿಲು ಹತ್ತುವುದು, ಅಡಿಗೆಯ ಕೆಲಸ ಮಾಡುತ್ತಿದ್ದರು. ಗಂಡಸರು ಪಾದಗಳನ್ನು ನೋಡಬಾರದೆಂಬ ನಿಷೇಧ ಪಾದಗಳಿಗೆ ವೈದ್ಯಕೀಯ ಚಿಕಿತ್ಸೆಯನ್ನೇ ದುರ್ಲಭಗೊಳಿಸಿತ್ತು.

ಚೀನಾದ ಕನ್‌ಫ್ಯೂಷಿಯಸ್ ಧರ್ಮದ ಪ್ರಕಾರ ಸ್ತ್ರೀಯ ಇಷ್ಟಾನಿಷ್ಟ ಪ್ರಕೃತಿ ನಿಯಮಕ್ಕೆ ವಿರುದ್ಧ. ಪ್ರಾಚೀನ ಚೀನೀ ಗಾದೆ ಹೀಗಿದೆ: Ignorance is the best ornament of a Woman. ಶೀಲವಂತ ಸಾಧ್ವಿ ಮಹಿಳೆಯರ ಬಗ್ಗೆ ಬರೆದ Ni Erh ching ಎಂಬ ಪುಸ್ತಕದಲ್ಲಿ ಪಾದಗಳನ್ನು

ಕಟ್ಟಿಹಾಕುವುದು; ಅವನ್ನು ಬಾಗಿದ ಬಿಲ್ಲಿನಂತೆ ಸುಂದರಗೊಳಿಸುವುದಕ್ಕಲ್ಲ. ಹೆಂಗಸನ್ನು ಹೋಗದಂತೆ ತಡೆಯಲು ಎಂದಿದೆ. ಕಲೆ ಹೆಸರಲ್ಲಿ ನೀಡುವ ಹಿಂಸೆಯ ಮತ್ತೊಂದು ಉದಾಹರಣೆ ಕಾಲ್ಬೆರಳ ತುದಿಗಳ ಮೇಲೆ ನರ್ತಿಸುವ ರಷ್ಯನ್ನರ Ballet.

೧೯೭೭ ನವೆಂಬರ್‌ನಲ್ಲಿ ಸ್ಯಾನ್‌ಫ್ರಾನ್ಸಿಸ್ಕೋ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯ ಈ ಸಂಪ್ರದಾಯದ ಪರಿಣಾಮಗಳ ಬಗ್ಗೆ ನಡೆಸಿದ ಅಧ್ಯಯನ ವರದಿಯನ್ನು ಅಮೆರಿಕನ್ ಜರ್ನಲ್ ಆಫ್ ಪಬ್ಲಿಕ್ ಹೆಲ್ತ್ ಪತ್ರಿಕೆಯ ಅಕ್ಟೋಬರ್ ಸಂಚಿಕೆ ಪ್ರಕಟಿಸಿತು.

ಪ್ರಸಿದ್ಧ ಬರಹಗಾರ Steven R. Cummings (M.D. Professor of medicine and epidemology and biostatistics) ಪ್ರಕಾರ Osteoporosis (ಎಲುಬಿನ ಉರಿಯೂತ) ಬಗ್ಗೆ ನಡೆಸಿದ ಅಧ್ಯಯನದ ಒಂದು ಭಾಗವೇ ಕಟ್ಟಿದ ಪಾದಗಳ ಬಗೆಗಿನ ಮೊದಲ ಅಧ್ಯಯನ. Random ಆಗಿ ಆರಿಸಿದ ೧೯೩ ಬೀಜಿಂಗ್ ಸ್ತ್ರೀಯರಲ್ಲಿ (೮೦ ವರ್ಷದ ೯೩ ಜನ. ೭೦ರಿಂದ ೭೯ ವರ್ಷದ ೧೦೦ ಜನ) ೮೦ ವರ್ಷದೊಳಗಿನ ಶೇ. ೩೮, ೭೦ ವರ್ಷದ ಶೇ. ೧೮ ಸ್ತ್ರೀಯರು ಬಿಗಿತದ ದುಷ್ಪರಿಣಾಮಗಳಿಗೆ ತುತ್ತಾಗಿದ್ದರು. ಪಾದಗಳನ್ನು ಕಟ್ಟದ ಸ್ತ್ರೀಯರಿಗಿಂತ, ಕಟ್ಟಿಹಾಕಿದವರಲ್ಲಿ ಶೇ. ೩೮ಕ್ಕಿಂತ ಹೆಚ್ಚು ಜನ ಕುಸಿದು ಬೀಳುವ ಅಪಾಯವಿತ್ತು. ಇವರಲ್ಲಿ ಶೇ.೫.೧ lower hip bone density ಶೇ.೪.೭ ಜನರಿಗೆ ಕೆಳ ಬೆನ್ನುಮೂಳೆ lower spine bone density ಹಾಗೂ ಟೊಂಕ, ಬೆನ್ನೆಲುಬುಗಳು ಸೀಳಿಹೋಗುವ ಗಂಡಾಂತರದಲ್ಲಿದ್ದರು. ಮಲವಿಸರ್ಜನೆಯಂತಹ ಕೆಲಸಗಳಲ್ಲಿ ಸಹ ಮಂಡಿಯೂರಿ ಕುಳಿತುಕೊಳ್ಳಲಾರದೆ ತೊಳಲುತ್ತಿದ್ದರು. ಈ ಪದ್ಧತಿಯಿಂದ ಇಂದಿಗೂ ಮಿಲಿಯಾಂತರ ಮಹಿಳೆಯರು ತೀವ್ರ ಶಾರೀರಿಕ ನ್ಯೂನತೆಗಳನ್ನೆದುರಿಸುತ್ತಿದ್ದಾರೆ.

**ಪುರುಷರ ಪಾತ್ರ**

ಪುರುಷರು ಸ್ತ್ರೀಯರ ಪಾದಗಳನ್ನು ನೋಡಬಾರದೆಂಬ ನಿಷೇಧವಿದ್ದು, ಪಾದಗಳನ್ನು ಕಟ್ಟುವ ಜವಾಬ್ದಾರಿ ತಾಯಿಯರದಾಗಿತ್ತು. ಪುರುಷ ವೈದ್ಯರು ಚಿಕಿತ್ಸೆ ನೀಡುವಂತಿರಲಿಲ್ಲ. ಪರದೆಯ ಮರೆಯಿಂದ ಮಾತ್ರ ಆತ ಸ್ತ್ರೀಯರ ನಾಡಿಮಿಡಿತ ಪರೀಕ್ಷಿಸಬಹುದಿತ್ತು. ತಂದೆಯೆದುರು ಪಾದಗಳನ್ನು ಪ್ರದರ್ಶಿಸಿದ್ದೇ ಆದರೆ ತೀವ್ರಪರಿಣಾಮ ಎದುರಿಸಬೇಕಿತ್ತು. ಕಾಲು ಹಾಗೂ ಪಾದಗಳು ಪುರುಷರ ದೃಷ್ಟಿಗೆ ಬೀಳದಂತೆ ಎಚ್ಚರಿಕೆಯಿಂದಿರಬೇಕಿತ್ತು.

ಮಿಲಿಟರಿ ನೌಕರನ ಮನೆಗೆಲಸದವಳೊಬ್ಬಳ ಆತ್ಮಕಥೆಯಲ್ಲಿ ಈ ಪದ್ಧತಿ ಬಗ್ಗೆ ಪುರುಷರ ಪ್ರತಿಕ್ರಿಯೆ ಹೇಗಿತ್ತೆಂದು ತಿಳಿದುಬರುತ್ತದೆ. “ನನ್ನ ಧಣಿಯ ಇಬ್ಬರು ಹೆಣ್ಣುಮಕ್ಕಳಿಗೆ ಪಾದಗಳನ್ನು ಕಟ್ಟಲಾಗುತ್ತಿತ್ತು. ಧಣಿಯ ಹೆಂಡತಿ ಒಳಕೋಣೆಯಲ್ಲಿ ಮಕ್ಕಳ ಪಾದಗಳನ್ನು ಬೆಚ್ಚಗಿನ ನೀರಿನಲ್ಲಿ ಬಟ್ಟೆಯಿಂದ ಬಿಗಿದು ಸುತ್ತುತ್ತಿದ್ದಳು. ಅಪಾರ ನೋವು ತಾಳಲಾರದ ಮಕ್ಕಳು ಅಳತೊಡಗಿದರು. ಕೈದೋಟದಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ತಂದೆಗೆ ಈ ಅಳುವಿನಿಂದ ಶಾಂತಿಭಂಗವಾಯಿತು. ಅವನು ಕಿರುಚಿದ. ಕೆಟ್ಟ ಹೆಂಗಸಿಗೆ ಹುಟ್ಟಿದವೇ ಸತ್ತಾದರೂ ಹೋಗಬಾರದೆ? ಎಂದು”.

ಹಾಲೂಡಿಸುವ ಸ್ತ್ರೀಯರ ತೆರೆದೆದೆಯನ್ನು ನೋಡಿ ಕಿಂಚಿತ್ತೂ ವಿಚಲಿತನಾಗದ ಚೀನೀ

ವಿದ್ಯಾರ್ಥಿ ವಿದೇಶೀ ಮಹಿಳೆಯೊಬ್ಬಳು ಆತನೆದುರಿಗೆ ತನ್ನ ಶೂಗಳನ್ನು ಬಿಚ್ಚಿದಾಗ ಸ್ತಂಭೀಭೂತನಾಗುತ್ತಿದ್ದನಂತೆ. ಪುರುಷ ಕವಿಗಳು ತಮ್ಮ ರಚನೆಗಳಲ್ಲಿ ಪುಟ್ಟ ಪಾದಗಳನ್ನು ಹಾಡಿ ಹೊಗಳುತ್ತಿದ್ದರು. ಭೋಗದ ಶೃಂಗಾರ ಕವಿತೆಗಳಲ್ಲಿ ಪುಟ್ಟ ಪಾದಗಳಿಗೆ ವಿಶೇಷ ಸ್ಥಾನ.

### ಶೂಗಳು

ಶೂಗಳು ಮೊನಚಾಗಿದ್ದು, ಅವುಗಳನ್ನು ತಯಾರಿಸಲು ರೇಷ್ಮೆ, ಸ್ಯಾಟಿನ್ ಹಾಗೂ ಹತ್ತಿ ಬಳಸುತ್ತಿದ್ದರು. ಮಹಿಳೆಯರು ಮನೆಗಳಲ್ಲಿ ಶೂಗಳನ್ನು ಕಸೂತಿಯಿಂದ ಸಿಂಗರಿಸುತ್ತಿದ್ದರು. ಅವುಗಳ ಮೇಲೆ ಜನಪದ ಕಥೆಗಳುಳ್ಳ ಸುಂದರ ಚಿತ್ರಗಳಿರುತ್ತಿದ್ದು, ಕಾಣಿಕೆಯಾಗಿ ಕೊಡಲಾಗುತ್ತಿದ್ದ ಇವನ್ನು ಲೋಟಸ್ ಶೂ ಎಂದು ಕರೆಯಲಾಗುತ್ತಿತ್ತು.

Harbin ನಲ್ಲಿನ zhiqiang ಪುಟ್ಟ ಶೂಗಳ ಉತ್ಪನ್ನ ನಿಲ್ಲಿಸಿದ ಕೊನೆಯ ಕಾರ್ಖಾನೆ. Xinhna news agency - ನವ ೧೯೯೮ ರಲ್ಲಿ ಈ ಬಗ್ಗೆ ವರದಿಸಿತು. ವಿಶೇಷವಾಗಿ ಬೇಡಿಕೆ ಬರದ ಕಾರಣ ಶೂಗಳ ಉತ್ಪಾದನೆಯನ್ನು ನಿಲ್ಲಿಸಲಾಯ್ತು. ವಯಸ್ಸಾದ ಹೆಂಗಸರಿಗೆ ಮಾತ್ರ ಚಿಕ್ಕ ಶೂಗಳನ್ನು ತಯಾರಿಸಲಾಗುತ್ತಿತ್ತು. ಪಾಶ್ಚಿಮಾತ್ಯರ ಆಗಮನ ಇತ್ಯಾದಿಗಳಿಂದ ಈ ಪದ್ಧತಿ ಕ್ರಮೇಣ ಕಣ್ಮರೆಯಾಗಿ ಪುಟ್ಟ ಜೋಪು ಮೂತಿಯ ಶೂಗಳು ಬಿಕರಿಯಾಗದೆ ಉಳಿದವು. ಅವು ಪುಟ್ಟ ಮಕ್ಕಳ ಕಾಲಿಗೂ ಹೊಂದುತ್ತಿರಲಿಲ್ಲ. ಮಾರಾಟವಾಗದ ಮಾಲನ್ನು ಮ್ಯೂಸಿಯಂಗೆ ದಾನ ಮಾಡುತ್ತೇನೆಂದು ಫ್ಯಾಕ್ಟರಿಯ ಮುಖ್ಯಸ್ಥ Due Guanghua ಪ್ರಕಟಿಸಿದರು.

### ಲಿಲ್ಲಿ ಪಾದಗಳು

ಸ್ವತಃ ಕವಿಯೂ ಆಗಿದ್ದ Namtang ರಾಜ ಸುತ್ತ ಒಡವೆ, ಮುತ್ತು ಹಾಗೂ ಚಿನ್ನದ ದಾರಗಳನ್ನೇಳೆಬಿಟ್ಟು ಸಿಂಗರಿಸಿದ್ದ ಆರು ಅಡಿಯೆತ್ತರದ ಲಿಲ್ಲಿ ಹೂವಿನ ಮೇಲೆ ತನ್ನ ಹುಡುಗಿಯೊಬ್ಬಳಿಂದ ಕಾಲ್ಬೆರಳ ತುದಿಯ ಹೆಜ್ಜೆಗಳಿಂದ ನೃತ್ಯ ಮಾಡಿಸುತ್ತಾನೆ. ಅಂದಿನಿಂದ ಜನ ಪುಟ್ಟ ಪಾದಗಳನ್ನು ಚಿನ್ನದ ಲಿಲ್ಲಿಯೆಂದು ಕರೆಯತೊಡಗಿದರು.

### ಲೈಂಗಿಕ ದೃಷ್ಟಿಕೋನ

ಪ್ರಾಚೀನ ಚೀನಾದಲ್ಲಿ ಸ್ತ್ರೀಯರ ಪುಟ್ಟ ಪಾದ ಕಾಮೋತ್ತೇಜಕ ಅಂಗವಾಗಿತ್ತು.[೬] ಪಾದಗಳನ್ನು ಲೈಂಗಿಕ ಕ್ರಿಯೆಗೆ ಬಳಸುವ ಅನೇಕ ವಿಧಾನಗಳನ್ನು ತಿಳಿಸುವ ಕೈಪಿಡಿಗಳು ದೊರೆಯುತ್ತಿದ್ದವು. ಚೀನೀ ಪುರುಷರು ಕೈಯಲ್ಲಿ ಹರೆಯದ Bosom (ಸ್ತನ)ಗಳನ್ನು ಹಿಡಿದಾಗ ಆತನಲ್ಲುಂಟಾಗುವ ಪ್ರಚೋದನೆಗಳೇ ಪುಟ್ಟಪಾದಗಳನ್ನು ಹಿಡಿದ ಸಂದರ್ಭಗಳಲ್ಲೂ ಆತನನ್ನು ಉತ್ತೇಜಿಸುತ್ತವೆನ್ನಲಾಗಿದೆ. ಪಾದಗಳನ್ನು ಕಟ್ಟಿಹಾಕುವುದರಿಂದ ಮಾರ್ಪಾಟಾಗುವ ನಡಿಗೆಯಿಂದಾಗಿ, ಗರ್ಭಕೋಶದಿಂದ ಜನನೇಂದ್ರಿಯದ ಹೊರದ್ವಾರದವರೆಗಿನ ಲೈಂಗಿಕ ಮಾರ್ಗ ಬಲಗೊಳ್ಳುವುದಲ್ಲದೆ ಹೆಚ್ಚು ನೇರಗೊಳ್ಳುತ್ತದೆಂದು ಹೇಳಲಾಗಿದೆ. ಅಲ್ಲದೆ ಸ್ತ್ರೀಯ ನಿತಂಬ ಹಾಗೂ ಲೈಂಗಿಕ ಮಾರ್ಗಗಳು ಪುರುಷನ ಜನನೇಂದ್ರಿಯವನ್ನು ಬಿಗಿಯಾಗಿ ಹಿಡಿದುಕೊಳ್ಳುತ್ತವೆಂದೂ ಹೇಳಲಾಗಿದೆ. ನರಗಳು ಒಂದೇ ಭಾಗದಲ್ಲಿ ಕೇಂದ್ರೀಕೃತವಾಗುವುದರಿಂದ ಆ ಭಾಗವು ಹೆಚ್ಚು ಕಾಮೋನ್ಮಾದವುಂಟು

ಮಾಡುತ್ತದೆಂಬುದು ನಂಬಿಕೆ. ಈ ಕಾಲದ ಕಾವ್ಯಗಳಲ್ಲಿ ಪುಟ್ಟ ಪಾದಗಳ ಬಗ್ಗೆ ಮೋಹದ ಕಾಮೋತ್ತೇಜಕ ಬರಹಗಳಿವೆ. ಹಲವೆಡೆ ಪುಟ್ಟಪಾದಗಳ ಬಗೆಗಿನ ಉನ್ಮಾದ ಅತಿ ಎನಿಸುವಷ್ಟಿದೆ. ಸ್ತ್ರೀಯರ ಪುಟ್ಟ ಪಾದಗಳನ್ನು ಪುರುಷರು ಮುದ್ದಿಸುತ್ತಿರುವ ಅನೇಕ ಅಶ್ಲೀಲ ಕೆತ್ತನೆಗಳು, ವರ್ಣಚಿತ್ರಗಳು ಕಂಡುಬಂದಿವೆ. ಪಾದಗಳನ್ನು ಕಟ್ಟುವುದರ ಹಿಂದೆ, Fetish (ಕಾಮೋತ್ತೇಜನ) ಬಲವಾಗಿ ಕೆಲಸಮಾಡಿದೆ. ಚಿಕ್ಕ ಪಾದಗಳು, ನಾಜೂಕಿನ ನಡಿಗೆ ಸ್ತ್ರೀತ್ವದ ಧ್ಯೋತಕವಾಗಿದ್ದವು. ಕಟ್ಟಿದ ಪಾದಗಳಿಂದಾಗಿ ಹೆಚ್ಚು ಓಡಾಡಲಾರದ ಅಸಮರ್ಥತೆ ಸ್ತ್ರೀಯ ಕನ್ಯತ್ವವನ್ನು ಪರೋಕ್ಷವಾಗಿ ದೃಢೀಕರಿಸುತ್ತಿತ್ತು.

## ಪದ್ಧತಿಯಿಂದ ಹೊರಗುಳಿದವರು

ದಕ್ಷಿಣ ಚೀನಾದ kwangtung, kwangsi fukien ಸ್ತ್ರೀಯರು ಹೆಚ್ಚು ಸ್ವಾತಂತ್ರ್ಯ ಹಾಗೂ ಪ್ರಭಾವವುಳ್ಳವರಾಗಿದ್ದಲ್ಲದೆ, ಹೊಲಗಳಲ್ಲಿ, ಕೂಲಿಗಳಾಗಿ, ಅಂಬಿಗರಾಗಿ ಶಾರೀರಿಕ ಕೆಲಸ ಮಾಡುತ್ತಿದ್ದರಿಂದ ಸಹಜವಾಗಿ ಈ ಪದ್ಧತಿ ಅನುಸರಿಸಲಿಲ್ಲ. ಉತ್ತರ ಚೀನಾದಲ್ಲಿ ಇದರ ಬಳಕೆ ಹೆಚ್ಚು. ನೈರುತ್ಯ ಚೀನಾದ ಮೂಲನಿವಾಸಿಗಳು ಈ ಪದ್ಧತಿಯಿಂದ ಹೊರಗಿದ್ದರು. ಚೀನಾದ ನೆರೆಹೊರೆಯವರೂ, ಚೀನಾವನ್ನೊಂದು ಬಾರಿ ವಶಪಡಿಸಿಕೊಂಡವರೂ ಆದ Jurhan, Mangol ರು ಹಾಗೂ ಮಂಚೂಗಳಲ್ಲಿ ಈ ಸಂಪ್ರದಾಯವಿರಲಿಲ್ಲ. ಕ್ಯಾಂಟನ್ ಪ್ರದೇಶದಲ್ಲಿನ ಪುರುಷರು ಕೆಲಸದ ಮೇಲೆ ಸಮುದ್ರದಲ್ಲಿ ಬಹುದೂರದವರೆಗೂ ಹೋಗುತ್ತಿದ್ದು, ಮನೆಯ ಜವಾಬ್ದಾರಿಯೆಲ್ಲವನ್ನೂ ಹೆಂಗಸರೇ ಹೊರುತ್ತಿದ್ದುದರಿಂದ ವಿನಾಯ್ತಿ ಪಡೆದಿದ್ದರು.

ಮಂಚೂ ರಾಜರು ಇದನ್ನು ನಿಷೇಧಿಸಿ ಕಾನೂನು ಹೊರಡಿಸಿದ್ದರೂ ಜನಮನ್ನಣೆ ಗಳಿಸದೆ ಹಿಂತೆಗೆದುಕೊಂಡರು. ತರುವಾಯ ದಕ್ಷಿಣಚೀನಾದ ಕೆಲ ಸ್ತ್ರೀಯರು ಹಾಗೂ ಅರಮನೆಯನ್ನು ಪ್ರವೇಶಿಸಬೇಕಿದ್ದ ಕೆಲ ಹುಡುಗಿಯರು ಮಾತ್ರ ತಮ್ಮ ಪಾದಗಳನ್ನು ಕಟ್ಟಿಹಾಕದೆ ಬಿಟ್ಟರು. ದುಡಿಯುವ ವರ್ಗವಾದ ದಾಸಿಯರ, ಗುಲಾಮ ಹುಡುಗಿಯರ ಪಾದಗಳು ಮಾತ್ರ ಕಟ್ಟದೆ ಸುರಕ್ಷಿತವಾಗಿದ್ದವು. ತೀರ ಬಡವರ್ಗದ ಹೆಣ್ಣುಮಕ್ಕಳಲ್ಲಿ ಈ ಸಂಪ್ರದಾಯವಿರಲಿಲ್ಲ.

## ಅಂತ್ಯ

ಚೀನಾ ಆಕ್ರಮಣದ ನಂತರ ಹೆಂಗಸರಿಗೆ ಹೆಚ್ಚಿನ ಸ್ವಾತಂತ್ರ್ಯ ನೀಡಿ ಪಾದಗಳನ್ನು ಕಟ್ಟುವ ಕ್ರೂರ ಪದ್ಧತಿಯನ್ನು ನಿಲ್ಲಿಸಲು ಪ್ರಯತ್ನಿಸಿದರೂ ಅದು ತೀವ್ರವಾದ ವಿರೋಧ ಎದುರಿಸಿದ್ದು ದುರಾದೃಷ್ಟ. ಈ ಪದ್ಧತಿ ಉಳಿಸುವತ್ತ ಒಲವು ತೋರುವುದು ಪರೋಕ್ಷವಾಗಿ ವಿದೇಶೀ ಆಕ್ರಮಣ ವಿರೋಧಿಸಿ, ದೇಶಪ್ರೇಮ ಮೆರೆದಂತೆಂಬ ಭಾವನೆ ಚೀನೀಯರಲ್ಲಿತ್ತು. ವಿಧಿಯಿಲ್ಲದೆ ಮಂಚೂಗಳು ಪ್ರಯತ್ನ ಕೈಬಿಡಬೇಕಾಯಿತು. ಉದಾ: ಮಂಚೂ ರಾಜನಾದ Kanghshsi ಇದರ ವಿರುದ್ಧ ಹೊರಡಿಸಿದ ಆಜ್ಞೆ ಕೆಲವೇ ವರ್ಷಗಳಲ್ಲಿ ನೆನೆಗುದಿಗೆ ಬಿದ್ದಿತು. ಕೆಲ ಮಂಚೂ ಹುಡುಗಿಯರೂ ಚೀನೀ ರೀತಿ ರಿವಾಜುಗಳನ್ನು ಅನುಸರಿಸತೊಡಗಿ Chienlung ರಾಜ ಕಾನೂನು ಹೊರಡಿಸುವವರೆಗೂ ಈ ಅನುಕರಣೆ ನಿಲ್ಲಲಿಲ್ಲ.

ಪ್ರಮುಖ ವಿದ್ವಾಂಸರಾದ Li Juchen, Yuan Mei (೧೭೧೬-೧೭೯೯) Yu

chenghsieh (೧೭೭೫-೧೮೪೦) ಇದನ್ನು ಕಟುವಾಗಿ ನಿಂದಿಸಿದರು. ಈ ಪದ್ಧತಿ ವಿರುದ್ಧ ಕ್ರಮಗಳನ್ನು ಚೀನಾ ಸರ್ಕಾರ ೨೦ ನೇ ಶತಮಾನದಲ್ಲಿ ಆರಂಭಿಸಿದಾಗ ಕೆಲ ಸ್ತ್ರೀಯರು ಇದನ್ನು ಧಿಕ್ಕರಿಸಿದ್ದಲ್ಲದೆ ತಪಾಸಣಾಧಿಕಾರಿಗಳನ್ನು ತಮ್ಮ ಮಲಗುವ ಕೋಣೆಗಳಿಂದ ಹೊರಗಟ್ಟಿ ಓಡಿ ಹೋಗಿ, ಬೆಟ್ಟಗುಡ್ಡಗಳಲ್ಲಿ ಅಡಗಿಕೊಳ್ಳುತ್ತಿದ್ದರು. ೧೯೧೦ ಇರಲ್ಲಿ ಮುದ್ರಿತವಾದ ಕರಪತ್ರವೊಂದರಲ್ಲಿ In 25 Years there will be no foot binding in China ಎಂದಿದೆ. ಕ್ರೈಸ್ತ ಮಿಷನರಿಗಳೂ ಇದನ್ನು ವಿರೋಧಿಸಿದರು.

ಆಧುನಿಕ ಹೈ ಹೀಲ್ಡ್ ಶೂಗಳು ಈ ಸಂಪ್ರದಾಯಕ್ಕೆ ಪರ್ಯಾಯವಾದವು. ಹೈ ಹೀಲ್ಡ್ ಧರಿಸಿದ ಸ್ತ್ರೀಯರ ವಯ್ಯಾರದ ನಡಿಗೆ ಸೌಂದರ್ಯವನ್ನು ಇಮ್ಮಡಿಗೊಳಿಸಿ ಪಾದಗಳು ನೈಜವಾಗಿರುವುದಕ್ಕಿಂತ ಚಿಕ್ಕದಾಗಿ ಕಾಣುತ್ತಿದ್ದವು.

Art of living ಪ್ರಬಂಧದಲ್ಲಿ Li Liwengರು ನಾನು ಹೈ ಹೀಲ್ಡ್ ಶೂಗಳನ್ನು ಧರಿಸದ ಮೂರಿಂಚಿನ ಪಾದಗಳನ್ನು ನೋಡಿರುವಂತೆಯೇ ಹೈ ಹೀಲ್ಡ್ ಧರಿಸಿದ ೪-೫ ಇಂಚಿನ ಪಾದಗಳನ್ನು ನೋಡಿದ್ದೇನೆ. ಹೈ ಹೀಲ್ಡ್ ಧರಿಸಿದ ೪-೫ ಇಂಚಿನ ಪಾದಗಳ ಉದ್ದ ಮತ್ತು ಅವನ್ನು ಧರಿಸದ ಮೂರಿಂಚಿನ ಪಾದಗಳ ಉದ್ದವೆರಡೂ ಒಂದೇ ಸಮನಾಗಿದ್ದುವಲ್ಲದೆ ಮೂರಿಂಚಿನ ಪಾದಗಳೇ ನಾಲ್ಕೈದು ಇಂಚಿನ ಪಾದಗಳಿಗಿಂತಲೂ ಉದ್ದವೇನೋ ಎನಿಸುತ್ತಿತ್ತು. ಏಕೆಂದರೆ ಹೈ ಹೀಲ್ಡ್ ಧರಿಸಿದ ಪಾದಗಳು ಮೊನೆಯಂತೆ ಚೂಪಾಗಿ ಬಾಗಿರುತ್ತಿದ್ದು ಮೂರಿಂಚಿನ ಹೈ ಹೀಲ್ಡ್ ಧರಿಸದ ಪಾದಗಳು ಚಪ್ಪಟೆಯಾಗಿರುತ್ತಿದ್ದವು ಎಂದಿದ್ದಾರೆ.

೧೯೦೫ರಲ್ಲಿ ಚಕ್ರವರ್ತಿನಿ Dowager ಇನ್ನು ಮುಂದೆ ಹುಡುಗಿಯರ ಪಾದಗಳನ್ನು ಕಟ್ಟಿಹಾಕುವ ಅವಶ್ಯಕತೆಯಿಲ್ಲವೆಂಬ ಫರ್ಮಾನು ಹೊರಡಿಸಿದಳು. ಸಾಮ್ರಾಜ್ಞಿಯೇ ಇದರ ಅವಶ್ಯಕತೆಯಿಲ್ಲವೆಂದು ಸಾರಿದ್ದರಿಂದ ಪ್ರಜೆಗಳೂ ಈ ಪದ್ಧತಿ ತೊರೆಯಲನುವಾದರು.

ಉನ್ನತ ಸ್ಥಾನಗಳಲ್ಲಿನ ನೌಕರರು ರಾಜಾಜ್ಞೆಯನ್ನು ಉಲ್ಲೇಖಿಸಿ ಈ ಪದ್ಧತಿಯನ್ನು ಚೀನಾದಿಂದೋಡಿಸಲು ತಮ್ಮೆಲ್ಲ ಅಧಿಕಾರವನ್ನು ಬಳಸಲು ಒಪ್ಪಂದ ಮಾಡಿಕೊಂಡು ಪಾದಗಳನ್ನು ಕಟ್ಟದಂತೆ ಜನರಿಗೆ ಒತ್ತಡ ಹೇರತೊಡಗಿದರು. ಸುಮಾರು ೩.೨ ಮಿಲಿಯನ್ ಸ್ತ್ರೀಯರು ಇದರ ಪ್ರಭಾವಕ್ಕೊಳಗಾದರು. ಮೇಲ್ವಿಚಾರಕರನ್ನು ಕಳುಹಿಸಿ ಜನರಲ್ಲಿ ಇದರ ವಿರುದ್ಧ ಜಾಗೃತಿ ಮೂಡಿಸುತ್ತಿದ್ದರು. ಈ ಸಂಪ್ರದಾಯ ವಿರೋಧಿ ಸಾಹಿತ್ಯವಿರುವ ಹೊತ್ತಿಗೆಗಳನ್ನು ಜನರಿಗೆ ತಲುಪಿಸುತ್ತಿದ್ದರು. ಈ ಪದ್ಧತಿ ವಿರೋಧಿ ಸಂಘಟನೆ ಕಟ್ಟುವ ಜನರಿಗೆ ಸಹಾಯಹಸ್ತ ನೀಡುತ್ತಿದ್ದರು. ಯಶಸ್ವಿಯಾಗಿ ಕೆಲಸ ನಿರ್ವಹಿಸಿದ ಸಂಘಟನೆಗಳಿಗೆ ಸಮಾರಂಭ ಏರ್ಪಡಿಸಿ ಹೊಗಳಿಕೆ ಮುದ್ರಿಸಿದ ಪದಕಗಳನ್ನು ವಾದ್ಯ ಸಂಗೀತಗಳೊಂದಿಗೆ ಗೌರವಯುತವಾಗಿ ಕೊಡುತ್ತ ಸಂತೋಷ ವ್ಯಕ್ತಪಡಿಸುತ್ತಿದ್ದರು. ನಿಯಮಿತ ಮೇಲ್ವಿಚಾರಣೆ ನಡೆಸಿ, ಶಾಲೆ ಹಾಗೂ ವಾಸದ ಮನೆಗಳ ಹತ್ತು ವರ್ಷದೊಳಗಿನ ಹೆಣ್ಣು ಮಗುವಿನ ಪಾದಗಳನ್ನು ಕಟ್ಟದಂತೆ ನಿರ್ಬಂಧಿಸಲಾಯಿತು.

ಶಾಂಘಾಯಿನಲ್ಲಿ ೧೮೯೫ರಲ್ಲಿ ಮೊದಲ ವಿರೋಧಿ ಸಂಘವು ಆರಂಭಗೊಳ್ಳುತ್ತಿದ್ದಂತೆಯೇ ಇತರೆ ಪ್ರಮುಖ ನಗರಗಳಲ್ಲಿ ಹಾಗೂ ದೇಶಾದ್ಯಂತ ಶಾಖೆಗಳು ಹರಡಿಕೊಂಡವು. ಸಂಘದ

ಸದಸ್ಯರು ತಮ್ಮ ಹೆಣ್ಣುಮಕ್ಕಳ ಪಾದಗಳನ್ನು ಕಟ್ಟುವುದನ್ನು ನಿಲ್ಲಿಸಿದರಲ್ಲದೆ ಅವರ ಹೆಸರು ಹಾಗೂ ವಯಸ್ಸನ್ನು ಸಂಘದ ರಿಜಿಸ್ಟರಿನಲ್ಲಿ ನೋಂದಣಿ ಮಾಡಿಸುತ್ತಿದ್ದರು. ಸದಸ್ಯರ ಮಕ್ಕಳಿಗೆ ಸಂಗಾತಿಗಳ ಹುಡುಕಾಟ ಸುಲಭವಾಯಿತು. ಈ ಸದಸ್ಯರು ತಮ್ಮ ಗಂಡುಮಕ್ಕಳಿಗೆ ಪಾದಗಳನ್ನು ಕಟ್ಟಿಸಿಕೊಂಡ ಹುಡುಗಿ ತರುವುದನ್ನು ನಿಷೇಧಿಸಲಾಗಿತ್ತು.

೧೯೧೧ರಲ್ಲಿ ಸಂಪ್ರದಾಯವನ್ನು ಬಿಡದೆ ಅನುಸರಿಸುತ್ತಿರುವ ೧೧ರಿಂದ ೧೬ ವರ್ಷದೊಳಗಿನ ಹುಡುಗಿಯರೆಲ್ಲರ ಹೆಸರುಗಳನ್ನು ಪಟ್ಟಿಮಾಡಲಾಯಿತು. ಜವಾಬ್ದಾರರನ್ನು ಹಿಡಿದು ರಾಜಾಜ್ಞೆಯ ಉಲ್ಲಂಘನೆಗೆ ಜುಲ್ಮಾನೆ ವಿಧಿಸಲಾಗುತ್ತಿತ್ತು. ತಂದೆ ತಾಯಿಯರ ಆರ್ಥಿಕ ಸ್ಥಿತಿಗನುಗುಣವಾಗಿ ದಂಡವು ನಿಗದಿಯಾಗಿತ್ತು. ಬಡಜನರ ಜುಲ್ಮಾನೆ ಒಂದು ಡಾಲರ್. ಸರ್ಕಾರಿ ನೌಕರರ ಪ್ರತಿ ಮಗುವಿಗೆ ನಾಲ್ಕು ಡಾಲರ್‌ಗಳ ದಂಡ. ಈ ಪದ್ಧತಿ ತೊರೆಯಲು ನಿರಾಕರಿಸಿದ ಪ್ರತಿವರ್ಷವೂ ದಂಡ ತೆರಬೇಕಾಗಿತ್ತು. ಪ್ರತಿ ಬಾರಿಗೂ ದಂಡದ ಹಣ ಏರಿಸಲಾಗುತ್ತಿತ್ತು. ಈ ಪದ್ಧತಿಯ ವಿರೋಧಕ್ಕೆ ಪೂರಕವಾಗಿ ವರ್ತಿಸಿದವರಿಗೆ A Woman who is submissive to authority ಎಂದು ಕೆತ್ತಿದ ಬೆಳ್ಳಿ ಪದಕ ನೀಡಿ ಪುರಸ್ಕರಿಸಲಾಯಿತು. ಈ ಪದಕಗಳನ್ನು ಮಕ್ಕಳ ಪಾದಗಳನ್ನು ಕಟ್ಟಿಹಾಕದೆ ಮುಕ್ತವಾಗಿ ಬಿಟ್ಟ ತಂದೆ-ತಾಯಿಯರಿಗೆ ಹಾಗೂ ಪಾದಗಳನ್ನು ಕಟ್ಟಿಕೊಳ್ಳದ ಹೆಂಗಸರಿಗೆ ನೀಡಲಾಗುತ್ತಿತ್ತು.

ಈ ಪದ್ಧತಿ ವ್ಯಾಪಕವಾಗಿದ್ದ Shensi ಗಡಿಪ್ರದೇಶದಲ್ಲಿ ಸ್ತ್ರೀಪರ ಚಳುವಳಿಯಲ್ಲಿ ಮಹಿಳೆಯರು ನೂರಾರು ಸಾವಿರಗಳಲ್ಲಿ ಒಟ್ಟುಗೂಡಿದರು. ಕೈಗಾರಿಕೀಕರಣಕ್ಕೆ ಮೊದಲು ದುರ್ಬಲವಾಗಿದ್ದ ಚಳುವಳಿ ತೀವ್ರಗೊಂಡು ಎಲ್ಲೆಡೆಗೂ ಹರಡಿತು. ಮಹಿಳೆಯರು ಹೆಚ್ಚು ಉದ್ಯೋಗಸ್ಥರಾದಂತೆ ಪುರುಷರಿಗೂ ಕಟ್ಟಿಹಾಕಿದ ಪಾದಗಳ ಅಡಚಣೆ ಗೋಚರವಾಗತೊಡಗಿತು. ೧೯ನೇ ಶತಮಾನದ ಮಧ್ಯಭಾಗದಲ್ಲಿ ಪಾಶ್ಚಿಮಾತ್ಯರ ಚೀನಾ ಪ್ರವೇಶ ಹಾಗೂ ಶೂಗಳ ಉತ್ಪಾದನೆ ಮನೆಗಳಿಂದ ಕಾರ್ಖಾನೆಗಳಿಗೆ ವರ್ಗವಾಗಿ, ಈ ಸಂಪ್ರದಾಯವು ಕೊನೆಗಾಣಲು ಪ್ರಭಾವ ಬೀರಿದವು.

Sun yat senರ ಕ್ರಾಂತಿಯೊಂದಿಗೆ ೧೯೧೧ರಲ್ಲಿ ಈ ಪದ್ಧತಿಯನ್ನು ಕಾನೂನುಬದ್ಧವಾಗಿ ನ್ಯಾಯಬಾಹಿರ ಗೊಳಿಸಲಾಯಿತು. ೧೦ನೇ ಶತಮಾನದಿಂದ ಚಾಲ್ತಿಯಲ್ಲಿದ್ದ ಈ ಪದ್ಧತಿ ೧೯೧೧ರಲ್ಲಿ ನ್ಯೂ ಚೈನೀಸ್ ರಿಪಬ್ಲಿಕ್ ಇದನ್ನು ನಿಷೇಧಿಸುವವರೆಗೂ ಚಾಲ್ತಿಯಲ್ಲಿತ್ತು. ರಾಜಸಂತತಿ ಆಳ್ವಿಕೆ ಕೊನೆಗಾಣುವುದರೊಂದಿಗೆ ೨೦ನೇ ಶತಮಾನದಲ್ಲಿ ಇದು ಅಂತ್ಯ ಕಂಡಿತು.

ಚೀನಾದ ಸಂಸ್ಕೃತಿಯ ಒಂದು ಭಾಗವಾಗಿ ಅವರ ದಿನಚರಿಯಲ್ಲಿ ಈ ಪದ್ಧತಿ ಹೇಗೆ ಬೆರೆತುಹೋಗಿತ್ತೆಂಬುದಕ್ಕೆ ಎರಡು ಘಟನೆಗಳನ್ನು ಚೀನೀ ಸ್ತ್ರೀಯರ ಯಾತನಾಮಯ ಬದುಕಿಗೆ ಸಾಕ್ಷಿಯಾಗಿ ಅನುವಾದಿಸಿ ಕೊಡಲಾಗಿದೆ:

"ನಾನು ದೊಡ್ಡವಳಾಗುತ್ತಿದ್ದೆ. ನನ್ನ ಪಾದಗಳನ್ನು ಬಿಗಿದುಕಟ್ಟಿರಲಿಲ್ಲ. ನನ್ನ ಭಾವೀ ಅತ್ತೆಯು ನನ್ನನ್ನು ತಿರಸ್ಕರಿಸಬಹುದೆಂದು ಭಯ ಹೆತ್ತವರಿಗೆ ಕಾಡತೊಡಗಿತ್ತು.

ಮಗು, ನಾನಿಂದು ನಿನ್ನ ಪಾದಗಳನ್ನು ಬಿಗಿದು ಕಟ್ಟುತ್ತಿದ್ದೇನೆ. ಪುಟ್ಟ ಪಾದಗಳ ಜೊತೆಯನ್ನು ದಯಪಾಲಿಸುವಂತೆ ಮಂಡಿಯೂರಿ ದೇವರನ್ನು ಬೇಡಿಕೋ.

ಅಯ್ಯೋ ದೇವರ! ನನ್ನ ಪಾದಗಳನ್ನು ಕಟ್ಟಿಹಾಕುವುದು ನನಗಿಷ್ಟವಿಲ್ಲ. ಜಾಗರೂಕತೆಯಿಂದ ಎಲ್ಲ ಸಿದ್ಧಪಡಿಸಿದ್ದಾರೆ. ನನ್ನ ಮುಂದಿರಿಸಲ್ಪಟ್ಟ ದ್ರಾಕ್ಷಿ ಹೂಗಳ ಕಸೂತಿಯ ಒಂದು ಜೊತೆ ಚಿಕ್ಕ ಷೂಗಳು, ಮೂರಿಂಚು ಅಗಲ ಉದ್ದದ ಎರಡು ಬಟ್ಟೆಯ ಪಟ್ಟಿಗಳನ್ನು ನೋಡುತ್ತಲೇ ನಾನು ನಡುಗಿಹೋದೆ. ಅಮ್ಮ, ಇದರಿಂದ ತುಂಬ ನೋವಾಗುತ್ತದೆ. ನಡೆಯಲಾಗುವುದಿಲ್ಲ. ದಯವಿಟ್ಟು ಹೀಗೆ ಮಾಡಬೇಡ. ಭಯಮಿಶ್ರಿತ ಕಣ್ಣುಗಳಿಂದ ಕಣ್ಣೀರ್ಗರೆಯುತ್ತ ಗೋಗರೆದೆ.

ನಾನು ನಿನ್ನ ಪಾದಗಳನ್ನು ಕಟ್ಟಿಹಾಕಲೇಬೇಕು. ಏಕೆಂದರೆ, ನನಗೆ ನಿನ್ನನ್ನು ಕಂಡರೆ ಬಲುಪ್ರೀತಿ. ಕಟ್ಟಿಹಾಕದೆ ಬಿಟ್ಟರ, ನಿನಗೆ ಅನ್ಯಾಯವೆಸಗಿದಂತಾಗುತ್ತದೆ. ದೊಡ್ಡ ಪಾದಗಳನ್ನು ಹೊಂದಿದ ಹುಡುಗಿಯನ್ನು ಯಾವ ಗಂಡಸೂ ಒಪ್ಪಲಾರನೆಂಬುದನ್ನು ನೀನು ಅರ್ಥಮಾಡಿಕೊಳ್ಳಲೇಬೇಕು.

ಓ, ಅಮ್ಮಾ! ನಾನು ನೋವಿನಿಂದ ಸಾಯುತ್ತಿದ್ದೇನೆ. ಹೀಗೆ ಪಾದಗಳನ್ನು ಬಿಗಿಸಿಕೊಳ್ಳುವ ಬದಲು, ಜೀವನಪೂರ್ತಿ ಕನ್ಯೆಯಾಗಿಯೇ ಉಳಿದುಬಿಡುತ್ತೇನೆ.

ಹೀಗಾಗಿ ನಾನು ಬಹುಪಾಲು ಸಮಯವನ್ನು ಬೆಂಕಿಯ ಮುಂದೆ ಕುಳಿತು ಮೈ ಕಾಯಿಸಿಕೊಂಡು ನೂಲು ತೆಗೆಯುತ್ತಾ ಕಳೆಯುತ್ತಿದ್ದೆ. ನಡೆದಾಡುವುದು ಬಹು ತ್ರಾಸದಾಯಕವಾಗಿತ್ತು. ಹೂಗಳ ಸೌಂದರ್ಯವನ್ನು ಕಣ್ತುಂಬ ನೋಡಿ ಹಿಗ್ಗುವ, ಬಲೆ ಬೀಸಿ ಮೀನು ಹಿಡಿದು ಕುಣಿದು ಕುಪ್ಪಳಿಸುತ್ತ ಕಳೆದ ದಿನಗಳು ಮರಳಿ ಬಾರವೇನೋ. ನನ್ನ ತಾಯಿಗಂತೂ, ನನ್ನ ಹಿರಿಯ ಅಕ್ಕನ ತರಹ ನಾನೂ ಕಸೂತಿ ಹೆಣೆಯುತ್ತ ಕಾಲಕಳೆಯುವುದೇ ಬೇಕಾಗಿತ್ತು. ನನಗೆ ಓದುವುದೊಂದೇ ಬೇಕಿರುವುದು.

ಓಹ್! ಒಬ್ಬ ಹುಡುಗಿ ಓದುತ್ತೇನೆನ್ನುವುದೇ? ಆಕಾಶವೇ ಕಳಚಿಬಿದ್ದೀತು. ಭೂಮಿ ನಡುಗೀತು, ಓದುವುದು ನಿನ್ನ ಅಣ್ಣಂದಿರ ಕೆಲಸ ನಿನ್ನ ಕೋಣೆಗಷ್ಟೇ ನೀನು ಸೀಮಿತ. ಓದಿದ ಹೆಂಗಸಿನಿಂದಾಗುವ ಪ್ರಯೋಜನ ತಾನೇ ಏನು?

ನಾನು ಬಾಲಕಿಯರ ಸ್ಕೂಲಿಗೆ ಹೋಗಬೇಕೆಂದು ನನ್ನ ದೊಡ್ಡಣ್ಣ ಬರೆದಿಲ್ಲವೆ?

ಅವನಿಗೇನು ಗೊತ್ತು? ಮುಂದಿನ ವರ್ಷದಿಂದ ನೀನು ಕಸೂತಿ ಹಾಕುವುದನ್ನು ಪ್ರಾರಂಭಿಸಬೇಕು. ನಿನ್ನ ಪಾದಗಳ ಕಟ್ಟನ್ನು ನಾನು ಮತ್ತಷ್ಟು ಬಿಗಿದು ಕಟ್ಟಿ ಅವನ್ನು ಇನ್ನೂ ಚಿಕ್ಕದಾಗಿಸಬೇಕು.

ಆದರೆ ಅಮ್ಮ, ನನ್ನ ಅಣ್ಣಂದಿರಂತೆ ನಾನೂ ಓದಬೇಕು. ಅವರಂತೆ ಓದಲು ನನ್ನನ್ನು ನೀನು ಬಿಡುವುದಿಲ್ಲವೆ? ನಾನೂ ಅವರ ಹಾಗೆ ಮನುಷ್ಯಳಲ್ಲವೆ?

ಅಸಂಬದ್ಧ! ಮನುಷ್ಯರ ಬಗ್ಗೆ ನಿನಗೇನು ತಿಳಿದಿದೆ! ನೀನೊಬ್ಬ ಹುಡುಗಿ. ಕರ್ತವ್ಯಬದ್ಧ ಪತ್ನಿ ಹಾಗೂ ಒಳ್ಳೆಯ ತಾಯಿಯಾಗಲಷ್ಟೇ ನಿನ್ನಿಂದ ಸಾಧ್ಯ. ಓದುವ ಅವಶ್ಯಕತೆಯಾದರೂ ನಿನಗೇನಿದೆ?

ಆ ಸಂದರ್ಭದಲ್ಲಿ ನಾನೇಕೆ ಓದಬೇಕೆಂದು ಸ್ಪಷ್ಟವಾಗಿ ಹೇಳಲಾಗಲಿಲ್ಲ. ಹುಡುಗ -ಹುಡುಗಿಯರ ಸಮಾನತೆಯ ಬಗೆಗೂ ನನ್ನ ತಾಯಿಯ ಜೊತೆಯಲ್ಲಿ ವಾದಮಾಡುವಂತಿರಲಿಲ್ಲ. ಓದಿದ ಹುಡುಗಿಯರು ಪ್ರಪಂಚದಲ್ಲಿ ಬಹಳಷ್ಟು ಒಳ್ಳೆಯ ಕಾರ್ಯಗಳನ್ನು ಸಾಧಿಸಬಲ್ಲರೆಂದು ನಾನು ಖಂಡಿತ ಹೇಳುವ ಹಾಗಿರಲಿಲ್ಲ. ನಾನೂ ಓದಬೇಕೆಂಬುದಷ್ಟೇ ನನಗೆ ಗೊತ್ತಿದ್ದ ವಿಷಯ. ಹೊಸ ಹೊಸ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬುದು ನನ್ನ ಆಸೆಯಾಗಿತ್ತು. ನನ್ನಕ್ಕನಿಗೆ ಆದ ಹಾಗೆ ಒಬ್ಬ ಹುಡುಗಿಯು ಅತ್ತೆ ಮಾವಂದಿರ ಶೋಷಣೆಗೊಳಗಾಗುವುದು, ಗಂಡನಿಗೆ ಮಕ್ಕಳನ್ನು ಹೆತ್ತುಕೊಡುವುದು, ಆಜ್ಞಾಧಾರಕ ಪತ್ನಿಯಾಗುವುದು ಇವಿಷ್ಟನ್ನು ಬಿಟ್ಟರೆ ಮತ್ತೇನೂ ಆಗುವುದು ಸಾಧ್ಯವಿಲ್ಲವೆ?

ಬೇರಾವ ಭರವಸೆಗಳೂ ಕಾಣದೆ ನಾನು ಆಹಾರ ತ್ಯಜಿಸಿ ಸಾವು ತಂದುಕೊಳ್ಳಲು ನಿರ್ಧರಿಸಿದೆ. ಅಕ್ಕ ಯಾವಾಗಲೂ ನನ್ನ ಹಾಸಿಗೆಯ ಬಳಿ ನಿಂತು ಸಮಾಧಾನಪಡಿಸಲೆತ್ನಿಸುತ್ತಿದ್ದಳು. ಪ್ರಿಯ ತಂಗಿ, ನಿನಗೇನಾಗಿದೆ? ನಾನು ನಿನಗಾಗಿ ಏನನ್ನಾದರೂ ಮಾಡಲು ಸಾಧ್ಯವಿದ್ದರೆ ನಾನು ಸಿದ್ಧಳಿದ್ದೇನೆ.

ನನಗೆ ಯಾರೂ ಏನು ಮಾಡಲೂ ಸಾಧ್ಯವಿಲ್ಲ. ನನ್ನ ಕಣ್ಣೀರು ಕೋಡಿಯಾಗಿ ಹರಿಯುತ್ತಿತ್ತು. ನಾನು....ನಾನು....ನನ್ನ ಓದನ್ನು ಮುಂದುವರೆಸಬೇಕು, ನನ್ನ ಈ ಮಾತುಗಳನ್ನು ಕೇಳಿ ಅಕ್ಕನೂ ಅಳುತ್ತಿದ್ದಳು. ನಾನು ನಿಜವಾಗಿಯೂ ಸತ್ತೇಹೋಗುತ್ತೇನೆಂದು ಹೆದರಿದ ನನ್ನ ತಾಯಿ ನನ್ನ ಮಾತಿಗೆ ಬಗ್ಗುವಂತಾಯಿತು.*"



"ನನಗೆ ಆಟವಾಡುವುದು, ಓಡುವುದೆಂದರೆ ಪಂಚಪ್ರಾಣ . ಹೀಗಾಗಿ ಅವರು ೭ನೇ ವಯಸ್ಸಿನ ನಂತರ ನನ್ನ ಪಾದಗಳನ್ನು ಬಿಗಿದು ಕಟ್ಟಿದರು. ಆದರೆ ನಾನು heavenly bossom ರೋಗಕ್ಕೆ ತುತ್ತಾಗಿ ಎರಡು ವರ್ಷ ಖಾಯಿಲೆ ಬಿದ್ದೆ. ಅವರು ಪಾದಗಳ ಕಟ್ಟುಗಳನ್ನು ಬಿಚ್ಚಲೇಬೇಕಾಯಿತು.

ನಾನು ಒಂಭತ್ತು ವರ್ಷದವಳಾದಾಗ ಮತ್ತೊಮ್ಮೆ ನನ್ನ ಪಾದಗಳನ್ನು ಬಿಗಿಯಲಾಯ್ತು. ಸಾಮಾನ್ಯವಾಗಿ ಬಿಗಿಯುತ್ತಿದ್ದುದಕ್ಕಿಂತಲೂ ಹೆಚ್ಚು ಬಿಗಿಯಾಗೇ ಕಟ್ಟಿದರು. ನನ್ನ ಪಾದಗಳು ಎಷ್ಟರಮಟ್ಟಿಗೆ ಘಾಸಿಗೊಂಡವೆಂದರೆ, ನಾನು ಮಂಡಿ ಹಾಗೂ ಕೈಗಳ ಸಹಾಯದಿಂದ ತೆವಳುತ್ತಿದ್ದೆ. ನೋವಿನಿಂದಾಗಿ ನನಗೆ ರಾತ್ರಿ ನಿದ್ದೆಯೇ ಬರುತ್ತಿರಲಿಲ್ಲ. ಅಮ್ಮ ನನ್ನ ಪಾದಗಳ ಮೇಲೆ ಭಾರಬಿಟ್ಟು ಮಲಗುತ್ತಿದ್ದಳು. ಆಕೆಯ ಕೆಳಗೆ ನಾನು ಕಾಲುಗಳನ್ನು ತೂರಿಸುತ್ತಿದ್ದೆ. ಇದರಿಂದ ನೋವು ಕೆಲಮಟ್ಟಿಗೆ ಶಮನವಾದಂತಾಗಿ ಸ್ವಲ್ಪ ನಿದ್ದೆ ಬಂದಂತಾಗುತ್ತಿತ್ತು.

ನಾನು ಹನ್ನೊಂದು ವರ್ಷದವಳಾಗುವಲ್ಲಿ ಕಾಲುಗಳು ನೋಯುವುದನ್ನು ನಿಲ್ಲಿಸಿದವು. ನನಗೆ ೧೩ ತುಂಬುವಲ್ಲಿ ಪಾದಗಳ ಕಥೆ ಮುಗಿದಿತ್ತು. ಕಾಲ್ಬೆರಳುಗಳು ಕೆಳಮುಖವಾಗಿ ಬಾಗಿದ್ದವು. ಅವುಗಳನ್ನು ಪಾದಗಳ ಕೆಳಭಾಗದಿಂದಲೂ ನೋಡಬಹುದಿತ್ತು. ಪಾದಗಳ ಮುಂಭಾಗ ಹಾಗೂ ಹಿಮ್ಮಡಿಯ ನಡುವಿನ ಕೊರಕಲಿನಂಥ ಭಾಗದಲ್ಲಿ ಎರಡು ಬೆರಳುಗಳನ್ನು ತೂರಿಸಬಲ್ಲಷ್ಟು ಜಾಗವಿತ್ತು. ನನ್ನ ಪಾದಗಳಂತೂ ಅತ್ಯಂತ ಚಿಕ್ಕ ರೂಪವನ್ನೇ ಹೊಂದಿದ್ದವು.

ಹುಡುಗಿಯ ಸೌಂದರ್ಯವು ಆಕೆಯ ಸುಂದರ ಮುಖಕ್ಕಿಂತಲೂ ಆಕೆಯ ಪಾದಗಳೆಷ್ಟು ಚಿಕ್ಕವಿವೆ ಎಂಬುದರ ಮೇಲೆ ನಿರ್ಧರಿತವಾಗುತ್ತಿತ್ತು. ಸುಂದರವಾದ ಮುಖವೇನೋ ಸ್ವರ್ಗದ ಕೊಡುಗೆಯಿದ್ದಂತೆ. ಆದರೀ ಪಾಪದ ಕಟ್ಟಿದ ಪಾದಗಳೋ ಸೋಮಾರಿತನದ ದ್ಯೋತಕವೇ ಸರಿ!

ಈ ಹೆಂಗಸರಿಗೋ ತಲೆ ಬಾಚಿಕೊಳ್ಳುವುದು, ಪಾದಗಳನ್ನು ಬಿಗಿದುಕೊಳ್ಳುವುದು, ಗಂಡಂದಿರಿಗಾಗಿ ಕಾಯುತ್ತಾ ಕೂರುವುದನ್ನು ಬಿಟ್ಟರೆ ಮತ್ತೇನೂ ತಿಳಿದಿಲ್ಲ."**

## ಪರಾಮರ್ಶನ

1. They did not begin to bind my feet until I was seven because I loved so much to run and play. Ida Pruitt: A daughter of Han, (The autobiography of

a Chinese working woman) From the story told her by Ning Lao T'AI, (New heaven Yale University press-1945.) P. 22.

2. In China women bound their feet tightly from infancy to prevent them from growing ro normal size For they had been taught for centuries to admire tiny feet as a mark of great beauty. Anil desilva: Chinese women and freedom.

3. Mach makers were not asked "Is she beautiful?" but" how small are her feet?" Idapruiit : A daughter of Han (The autobiography of a chinese working woman) from the story told her by Ning Lao T'AI-T'AI, (New heavan Yale University press-1945.) P. 22.

It was said that I was grown up and my feet were still unbound and that it was most probable that my Future mother-in law would refuse to accept me. - Anil desilva: Chinese women and freedom. P.33.

4. Nii ers ching one of the numerous books about virtuous women is even more explecit: " Feet are bound not to make them beautiful as a curved bow, but to restrain the women they go outdoors" - Olga Lang, Chinese family and socity. (New Heaven yale University press, London. GeoFFREY Cumberlege-Oxferd University.) P. 46

5. Fourteen years ago, the favourite concubine in the court of emperor Chen Hon Ten had set this fashion. She wanted to make her feet like the new moon in order to please her lord and tightly compressed them. Other women began to do the same and gradually this practice became so universal that girls who protested against it were severely punished, - Anil desilva: Chinese women and freedom.

6. During the Sung the notorious practice of Foot Binding first became common clearly marking fall in the status of women. The new Encyclopaedia Britannica. Inc. 15th Edition-1997, Vol.16 Macro, P. 106.

7. Like a fair complexion thin eyebrows and a gentle voice the gait pecculear to a woman who's feet were not permitted to grow had sexual appeal. - Olga lang, Chainese family and society (New Heaven yale University press, London. GeoFFREY Cumberlege- Oxferd University.) P. 17

* Anil de Silva, Chinese women and freedom , (My first suffering) P. 33

** A daughter of Han, (The autobiography of a Chinease working woman by IDA Pruitt) From the story told her by Ning Lao T'AI - T'AI, (New heaven Yale University press-1945.) P. 56

●

---

ಜೆ. ಪಿ. ಶೈಲಜ, ನಂ. ೧೧೯, ೩ನೇ ತಿರುವು, ಆನೇ ಮುಖ್ಯರಸ್ತೆ, ಆರ್.ಪಿ.ಸಿ. ಬಡಾವಣೆ
ಬೆಂಗಳೂರು - ೪೦

## ಡಾ। ಎಚ್. ಎಲ್. ಪುಷ್ಪ : ಮೂರು ಕವಿತೆಗಳು

### ಕುಂಬಾರನ ಚಕ್ರದಲ್ಲಿ

ವೃತ್ತಾಕಾರದ ಚಕ್ರವನ್ನು
ಬಿಗಿ ಮಾಡುತ್ತಿದ್ದಾನೆ ಒಂದೇ ಸಮನೆ
ಆ ಬಡಗಿ ಎಲ್ಲಿಯೂ ಬಿಗಿತಪ್ಪದಂತೆ
ಎಲ್ಲಿಯೂ ನುಸುಳಿ ಹೋಗದಂತೆ
ಜೀವದಿಂದ ಜೀವ, ಭವದಿಂದ ಭವ
ಸ್ವರ್ಗ ಕಾಮ - ಮೋಕ್ಷಕ್ಕೆ, ಸುರದೇವತೆಯ
ಅಧಿಪತ್ಯಕ್ಕೆ ಇಲ್ಲಿ ಹೊಸ ಅರ್ಥ ಹುಟ್ಟಿಕೊಂಡಿದೆ.

ಹಲ್ಲಿಗಳ ಮೈಯಿಂದ ತೊಟ್ಟಿಕ್ಕುವ ತಣ್ಣನೆಯ ನೆತ್ತರು
ತಣ್ಣಗಾಗಿಸಿ ತಾಪದ ಮೈ, ಲಾಕ್ಷಾರಸದ ಕೊಳವುಟ್ಟಿ
ಆ ಕೊಳದಲ್ಲಿ ತಾನೇ ನೆತ್ತರಿನ ಬಲಿಯಾಗಿ
ಕೊಂದವರುಳಿದರೇ ಇಲ್ಲಿ?
ಮೈಯೆಲ್ಲಾ ಸರ್ಪದ ವಿಷವೇರಿದರೂ
ಕಣ್ಣಲ್ಲಿ ಗಂಧರ್ವರ ಅನಂಗಲೀಲೆ
ಸಾವಿನ ನೆರಳಲ್ಲೂ ಕೂಗುವ ಎಳೆಹಕ್ಕಿಯ ಧ್ವನಿ.
ತಿರ್ರನೆ ತಿರುಗುವ ಗಾಲಿ ನಿಂತಲ್ಲಿ ನಿಲ್ಲದು.

ಗರ್ಭೋತ್ಸವದಲ್ಲಿ ಗರ್ಭಕಟ್ಟಿದ ರಾಣಿಯರು
ಎಲ್ಲೆಲ್ಲೂ ಸಂಭ್ರಮ, ಭವದಿಂದ ಭವಕ್ಕೆ
ಒಂದೇಸಮನೆ ಜೀವದ ತುಡಿತ
ಹಿಗ್ಗುವ ಗರ್ಭದ ಮೇಲಿನ ನೆರಿಗೆಗಳು
ಕವಿಯ ಕಣ್ಣಲ್ಲಿ ಮೂಡಿ

ಹುಟ್ಟು ಸಾವಿನ ನಡುವೆ
ಗೊತ್ತಿಲ್ಲದ ಕುದುರೆಯ ಹುಚ್ಚು ನಾಗಾಲೋಟ.

ಮಿಂಚಿನುಳುಗಳ ಹರಿದಾಟ
ಕಾಮನಿಣುಕುತ್ತಾನೆ ಎಲ್ಲೆಂದರಲ್ಲಿ
ಅವನ ಸುಮಬಾಣಗಳಲ್ಲಿ ಸಿಲುಕಿದವರು
ತಿರ್‍ರನೆ ತಿರುಗಿ ತಬ್ಬಿಬ್ಬಾಗಿ
ನಿಲ್ಲುತ್ತಾ, ಚಡಪಡಿಸುತ್ತಿದೆ
ಸಾವು ನೆಮ್ಮದಿಯ ಉಸಿರಿಗಾಗಿ.

ರತಿಯ ವೀಣೆಯಲಿ ಚಿಮ್ಮುವ ಹಾಡು
ಮನ್ಮಥನ ಬಿಲ್ಲಿನಲ್ಲಿ ಜಾರಿ ಬರುವ ಗಾನ
ನಡುವೆ ನೀಲಮಣಿ ನೀಲಾಂಜನೆ
ಜನರ ನಾಡಿ ಮಿಡಿತ ಹಿಡಿದ ಅಂಗನೆಗೆ
ಲಯ, ಜತಿ, ಗಾನ ಯಾವ ಲೆಕ್ಕ
ತೂಗಿ ತೊನೆವ ಹಾರಗಳು
ಬಳುಕು ಬಾಗಿನಲ್ಲಿ ಎಲ್ಲ ತಾಳ ಲಯ
ನುಡಿಸುತ್ತಾ ಎಲ್ಲ ನವಿರುಗಳ
ಎದೆಯಿಂದ ಹೊರಕ್ಕೆ, ಹೊರಗಿನಿಂದ ಒಳಕ್ಕೆ
ಮಿಂಚಿನಂತೆ ಮೂಡಿಸುತ್ತಾಳೆ
ರಾಗಿ, ವಿರಾಗಿಗಳ ಎದೆ ಬಡಿತದ ಲಯ ತಪ್ಪಿಸುತ್ತಾ
ತಾನೇ ಲಯವಾಗಿ ಹರಿಯುತ್ತಾಳೆ
ಅರಿವೇ ಇಲ್ಲದೆ ತನ್ನ ಸೆರಗಲ್ಲಿ
ಕಟ್ಟಿಟ್ಟ ಸಾವಿನ ಬುತ್ತಿಯನ್ನು ಮರೆತು.

ಇದು ದಾಹ, ಎಲ್ಲವನ್ನು ನುಂಗಿ ನೊಣೆವ ದಾಹ
ರಾಜ್ಯ, ಭೂಮಿ, ಹೆಸರಿನ ಇಂಗದ ದಾಹ
ಇದು ಅಣ್ಣ ತಮ್ಮಂದಿರ ದೂರಾಗಿಸಿ
ಅಧಿಕಾರದ ಮದವ ಎಲ್ಲೆಡೆ ಚೆಲ್ಲಿ
ಅಪ್ಪಿಕೊಳ್ಳುವುದು ಕೊನೆಗೆ ವೈರಾಗ್ಯದ ದಾರಿ.

ಅಡಿಮುಡಿಗಳವರೆಗೆ ಜೋಲುವ
ಬಳ್ಳಿ ದೇಹದ ಹುತ್ತಗಳು, ಒಳಗೊಳಗೇ
ಅಡಗಿದ ವಿಷಸರ್ಪಗಳು
ಅಂತರಂಗದೊಳಗೆ ನೆರಳಾಡುವ
ಕರಿನೆರಳುಗಳು ಹಿಂಡು ಹಿಂಡು

ಮೋಕ್ಷ ಸಿಕ್ಕೀತು ಹೇಗೆ
ಬರಿಯ ಈ ದೇಹದಂಡನೆಯಲ್ಲಿ
"ಈ ನೆಲವು ನಿನ್ನ ಎಂಜಲು
ನಿನ್ನಿಂದ ಎನಗಿದು ಬಂತು
ನಿನ್ನನೇ ನೀ ಧ್ಯಾನಿಸು"

ಮಮಕಾರದ ತೆರೆ ಹರಿದು
ಮಳೆಮೋಡಗಳಿಲ್ಲದ ಸ್ವಚ್ಛ
ನೀಲಾಗಸದಲ್ಲಿ ತೇಲಾಡುವ ಮೋಡಗಳು
ದೂರ ದೇಗುಲದಲ್ಲಿ ಮೆಲುದನಿಯ ಗಂಟೆದನಿ
ಉಳಿದಂತೆ ನಿರಾಳ ಸ್ವಚ್ಛ ಮೌನ.

* ಪಂಪನ ಆದಿ ಪುರಾಣದ ಓದಿನಿಂದ ಮೂಡಿದ ಕವಿತೆ.

## ಮಳೆಯ ಜಾಡಿನಲ್ಲಿ ಡಾಂಟೆ ಇತ್ಯಾದಿ.....

ಮಳೆ ನಿರೀಕ್ಷೆ ಇರದ ಆ ಸಂಜೆಯಲ್ಲಿ
ನೆಂದು ತೊಪ್ಪೆಯಾಗಿ ನಡುಗುತ್ತಾ
ತಲುಪಿ ಅಂಗಳದ ಮೆಟ್ಟಿಲು
ಸೀರೆ ಜಾಡಿಸುತ್ತಾ ಒದರಿ
ಹಗುರಾಗಿ ನಿದ್ರಿಸಿದ ಆ ರಾತ್ರಿ.

ಆ ರಾತ್ರಿ ಎಲ್ಲ ರಾತ್ರಿಗಳ ಹಾಗಲ್ಲ
ಎಲ್ಲ ಕಡೆ ತೊಳಗಿ ಬೆಳಗುವ ನಿಶ್ಶಬ್ದ ನೀರವ
ನಿದ್ರೆಯ ಕರಿ ಇರುಳ ನಡುವೆ ತೂರಿಹೋದ
ಅಸಂಖ್ಯಾತ ಬಿಳಿಮೋಡಗಳು.

ಭಾಷ್ಯಂ ಸರ್ಕಲ್ಲಿನ ತಿರುವಿನಲ್ಲಿ
ಇದ್ದಕ್ಕಿದ್ದಂತೆ ಎದುರಾದ ಡಾಂಟೆ
ಕಳಕೊಂಡ ಅವಳ ಬಗ್ಗೆ ಕಳವಳಗೊಂಡಿದ್ದ
ಬಿಳಿತೊಗಲಿನಲಿ ಪ್ರಣಯಗಾಥೆ ಮೂಡಿಸಿದಾಕೆ
ಬೇಲಿಯ ಮುಳ್ಳುಕಂಟಿಗೆ ಸಿಕ್ಕಿ
ನರಳುತ್ತಿದ್ದಳು ತರಚುಗಾಯಗಳಿಂದ
ಸ್ವರ್ಗ ನರಕಗಳ ನಡುವೆ ನೆನಪಾದರು ಒಂದೇ ಕ್ಷಣ

ಚಿರ ಪ್ರಣಯವ ಹಾಡುವ
ಅದೇ ಆ ನಾಡಿಗರು.

ರೋಮಾಂಚನಗೊಂಡು ಆ ಮುದುಕಿಯ
ಹಣ್ಣಿನ ಬುಟ್ಟಿಯ ನೋಡಿದೆ
ತಿನ್ನಬಾರದ ಹಣ್ಣ ಗಂಡನಿಗೆ ತಿನ್ನಿಸುವ ಈವ್
ಹಣ್ಣಿನ ಸವಿಯಲ್ಲಿ ಮುಳುಗಿ ಹೋದ ಆ್ಯಡಂ
ಮಿಲ್ಟನ್ ಪ್ಯಾರಡೈಸ್ ಲಾಸ್ಟ್‌ನಲ್ಲಿ ಪ್ರತ್ಯಕ್ಷವಾದರು.

ಕಣ್ಣರೆಪ್ಪೆಯಲ್ಲಿ ವೇಗವಾಗಿ ಮೂಡಿ
ಕರಗಿ ಹೋಗುವ ಕನಸುಗಳು ದಾಖಲಾಗುವುದಿಲ್ಲ
ಎಲ್ಲೋ ಸುರಿವ ಈ ಮಳೆಸಂಜೆಯಲಿ.
ಕೈಯಲ್ಲಿ ಕುರಿಮರಿ, ಕಣ್ಣಲ್ಲಿ ಕಂಡಿರದ ಹುಲಿ
ಪುಟಗಳ ಸರಸರನೆ ತೆರೆಯುತ್ತಾ
ಬ್ಲೇಕ್ ಗುಡುಗಿದ:
"Tiger Tiger burning bright
In the Forest's of Night"

ಮಿಂಚು ಗುಡುಗುಗಳ ನಡುವೆ ಅಸ್ಪಷ್ಟ ಮುಖ ತೋರಿ
ಮರೆಯಾದರು ಹಾಗೆ ಡಿ. ಆರ್.
ಪಾಬ್ಲೋ ನೆರೂದ ಗುಣಗುಣಿಸಿದ
ತಾನು ವರ್ಣಿಸದ ಚಿಲಿಯ ಲಿಲ್ಲಿ,
ಲೈಲಾಕ್, ರೋಜಾ ಹೂಗಳ ಸೌಂದರ್ಯದ ಬಗ್ಗೆ
ಬೀದಿಯ ಮೇಲೆ ಇರುವ ರಕ್ತದ ಬಗ್ಗೆ
ಚೋಳರಾಜ್ಯದ ಬೀದಿಯಲಿ, ಸುರಿವ ಮಳೆಯಲ್ಲಿ
ಸರಿದು ಹೋದರು ಕನ್ನಗಿ ಕೋವಲರು
ನೂಪುರವ ಹಿಡಿದು ಹತಾಶರಾಗಿ
ಶಿಲಪ್ಪದಿಕಾರಂ ಹಿಡಿದು ಸಿಟ್ಟುಸಿರುಬಿಟ್ಟರು
ಕಾರ್ಲೋಸ್ ಬೇಗುದಿಯಲ್ಲಿ.

ತುಂಬಿ ಹೊರಚೆಲ್ಲುವ ವೈನ್,
ಮುದಿಸೂಳೆಯರು, ತಲೆಹಿಡುಕರು
ಪದಗಳು ಸಿಗದೆ ತಡವರಿಸುತ್ತಾ ಪಾಚಿಸಿದರು
ಕವಿತೆಯ ಮೈ ಜುಮ್ ಎನ್ನುವಂತೆ
ಬೋದಿಲೇರನ ಲೋಕದೊಳಗಿಂದ ಮೈ ಕೊಡವುತ್ತಾ
ಲಂಕೇಶ್ ಆ್ಯಶ್‌ಟ್ರೇ ಹುಡುಕುತ್ತಾ ಗೊಣಗಿದರು

ಕ್ಯಾಮರಾ ಮಲಗಿತ್ತು ಮೇಜಿನ ಮೇಲೆ
ಅಪಾರ ನೆನಪುಗಳ ಅವಿತಿಟ್ಟು ಒಳಗೆ.

ಪತರುಗುಟ್ಟುವ ಎಲೆಗಳು
ಜಾರುತಿವೆ ಒಂದೊಂದೆ ಬಿರುಮಳೆಯಲ್ಲಿ
ಕೂರುತಿದೆ ನಿಧಾನ, ನೊಗ ಹೊತ್ತ ಮುದಿ ಎತ್ತಿನಂತೆ.
ತರುಲತೆಗಳ ನಡುವೆ ಪಿಸುನುಡಿದಳು ಅಕ್ಕ
ಎಲ್ಲರ ಗಂಡರ ಶೃಂಗಾರದ ಪರಿಯಲ್ಲ
ಎನ್ನ ನಲ್ಲನ ಶೃಂಗಾರದ ಪರಿ ಬೇರೆ
ಕಾಯದ ಕಳವಳದಲ್ಲಿ ಕನವರಿಸಿತು
ಅನುಭಾವದಲ್ಲಿ ಮಿಂದ ಮೈ.

ಇರದೆ ನಾರಿಯರು ಬಿಚ್ಚೊಗೆದು ರೇಷ್ಮೆಯ ದುಕೂಲಗಳಂತೆ
ರಂಜಿಸಿದವು ಕರ್ನಾಟಕದ ನದಿಗಳು
ಚಾಚಿದವು ಕೈಗಳ ತೊರೆವೆಣ್ಗಳಿರದೆ ನದಿಯನು ಅಪ್ಪುವಂತೆ
ಗೌನನ್ನು ಹೊದ್ದ ಲೇಡಿ ಮ್ಯಾಕಬತ್ ಅಲೆಯುತ್ತಾಳೆ
ಮೇಣದ ಬತ್ತಿಯ ಬೆಳಕಲ್ಲಿ
ರಕ್ತಸಿಕ್ತ ಕೈಯ ತೊಳೆಯಲು
ಕರಿನೆರಳ ಮುಸ್ಸಂಜೆ ಮಳೆಯಲ್ಲಿ
ಅಬ್ಬರಿಸಿದರು ಶೇಕ್ಸ್‌ಪಿಯರನ ಮಂತ್ರವಾದಿನಿಯರು
ರಕ್ತ, ಮಾಂಸ, ಕರುಳುಗಳ
ತಳ ಹತ್ತದಂತೆ ಬೇಯಿಸುತ್ತ.

ಭೂತದ ಗರ್ಭದಲ್ಲಿ
ಸೇರಿ ಹೋಗಿದೆ ಒಂದೊಂದೆ ಜೀವಂತ ಕಥೆ
ಈ ಮುಸ್ಸಂಜೆ ಮಳೆಯಲ್ಲಿ
ಎಲ್ಲ ನಿಂತಿದ್ದಾರೆ ನಿಲುವಂಗಿಗಳಲ್ಲಿ
ಮ್ಯೂಸಿಯಂ ಪೀಸುಗಳಾಗಿ
ಮಿಂಚು ಬೆಳಕಲ್ಲಿ ಕಾತರಿಸುತ್ತಿದ್ದಾರೆ
ರಕ್ತ, ಮಾಂಸ, ತೊಗಲಿಗಾಗಿ
ಹೆಜ್ಜೆ ಗುರುತುಗಳ ಅಳಿಸಿ ಮತ್ತೆ ಮೈದೋರಲು.

## ಆತ್ಮ ಸಂಗಾತಕ್ಕೆ ನೀನುಂಟು

ಚಂದ್ರನೆಳೆ ಕಿರಣದಲ್ಲಿ
ಮಿಂದು ಒದ್ದೆಯಾದ ಈ ಮೈ

ಮೆಲ್ಲನೆ ನಡುಗುತ್ತಿದೆ ಚಳಿಯ ಅಲೆಯಲ್ಲಿ
ಹೆಜ್ಜೆ ಮೂಡದ ಹಾದಿಯಲ್ಲಿ
ಹೂವುಗಳು ಉದುರುತ್ತಿವೆ ಮೆಲ್ಲಮೆಲ್ಲನೆ
ಗಾಳಿ ಬರೆದ ಎಳೆಗಳ ರಂಗೋಲಿಯ ಮೇಲೆ.

ಮೆಲ್ಲನೆ ಹರಡುತ್ತಿದೆ
ಕೊಲುವ ಕೇದಿಗೆಯ ಗಮಲು
ಎಲ್ಲೊ ಅಸ್ಪಷ್ಟ ಸರ್ಪಕನ್ನಿಕೆಯ ಹೊರಳು
ಕಾರಿರುಳಲ್ಲಿ ಇಮು, ಪಿರಮಿಯ ಕಾಯಿಸೋ ಬೆಳದಿಂಗಳು

ಎಲ್ಲೋ ಕರಗಿ ಹೋಗಿವೆ
ಈ ಶರೀರದ ಮಾಂಸ ಮೂಳೆಗಳು
ಹಾವಿನೊಂದಿಗೆ ಹಾವಂತೆ ತೆವಳಿ
ಓ ಶಾಮಾ, ಯಾಕೆ ಹಗುರಾಗಿಸಿದೆ
ನನ್ನನ್ನು ಪ್ರತಿರಾತ್ರಿ, ಪ್ರತಿ ಹಗಲು
ದಿಕ್ಕೆಟ್ಟು ಹೋಗಿದೆ ನನ್ನ ಲೋಕ
ಚಹರೆಯಿಲ್ಲದ ನೂರಾರು ಹೆಜ್ಜೆಗಳು
ಕ್ಷಣ ಕ್ಷಣಕ್ಕೂ ದಾರಿತಪ್ಪಿಸುತ್ತಿವೆ
ಮನೆಯಿಂದ ಈ ಯಮುನೆಯ ತೀರಕ್ಕೆ

ಶರೀರವಿಲ್ಲದೆ ಕಾಡುವ ಓ ಶಾಮಾ,
ನೀಲಗಗನದಲ್ಲಿ ಇಣುಕುವ ನಿನ್ನ ನೂರಾರು
ನೆರಳು ಅಣಕಿಸುತ್ತಿವೆ ನನ್ನನ್ನು
ಕನ್ನಡಿಯಲ್ಲಿ ನಿನ್ನ ಬಿಸಿ ಉಸಿರು ಚಾಚಿ
ನನ್ನ ಪ್ರತಿಬಿಂಬ ಮಂಕಾಗುತ್ತಿದೆ
ಎಲ್ಲ ನೆನಪುಗಳ ಮಂಜಾಗಿಸಿ.

ಈ ದೇಹದ ತುಂಬಾ ನಿನ್ನದೇ
ಕೊಳಲ ನುಡಿ, ನರನರವೂ ಬಿಗಿದು ಕೂಗಿದೆ
ಶಾಮಾ, ಓ ಶಾಮಾ,
ಹೇರಲಾರದ ವಿಚಿತ್ರ ನೋವು
ಅಂತರಂಗದಲ್ಲಿ ಜಿನುಗುವ
ಮಾತುಗಳಿಗೆ, ಪದದ ಅರ್ಥಕ್ಕೆ
ಸಿಕ್ಕದೆ ನುಣುಚಿಕೊಳ್ಳುತ್ತಿದೆ.

ನಿನ್ನದೇ ರಾಸಲೀಲೆಯಲ್ಲಿ ನೀನಿಲ್ಲ ಶಾಮ
ಒಬ್ಬೊಬ್ಬ ಗೋಪಿಕೆಯೂ ಒಬ್ಬೊಬ್ಬ ಶಾಮನ

ಜೊತೆಯಲ್ಲಿ ಮೈಮರೆತು
ಮೈಯೇ ಇಲ್ಲದ ನಿನ್ನೊಂದಿಗೆ
ನಾನೇನ ಗುರುತಿಸಲಿ?
ಹಾರಾಡುವ ಬಣ್ಣದ ಚಿಟ್ಟೆಗಳು
ಹರಿದು ಸರಿವ ಈ ಯಮುನೆ
ಎಲ್ಲೆಲ್ಲೂ ನಗು, ಪಿಸುಮಾತು
ರಾಸಲೀಲೆಯಲ್ಲಿ ರಸ ಉಕ್ಕುತ್ತಿದೆ
ಎಲ್ಲೆಲ್ಲೂ ಕೊಳಲ ದನಿ ತೇಲಿ
ಶಾಮನಿಲ್ಲದ ನಾನೋ ಬರಿ ಛಾಯೆ
ಎಲ್ಲೆಯಿಲ್ಲದ ಮೋಡಗಳ ಬರಿ ನೆರಳು.

ಯಮುನೆಯ ಉಸುಕಿನಲ್ಲಿ ಬಗ್ಗಿ ನೋಡಿದೆ
ಯಾವುದೋ ವಾಸನೆಗೆ ತಡಕಾಡಿದೆ
ಹೆಜ್ಜೆಗಳಿರಲಿಲ್ಲ, ವಾಸನೆಯೂ ತಿಳಿಯಲಿಲ್ಲ
ನಿನ್ನ ತುಟಿಗಳಿಲ್ಲದ ಕೊಳಲಧ್ವನಿ
ಹುಚ್ಚೆಬ್ಬಿಸುತ್ತಿದೆ ನನ್ನನ್ನು
ಎಲ್ಲಾ ರಾಗಗಳೂ ಹರಡಿಹೋಗಿವೆ
ಯಾವುದೂ ಕೈಗೆ ಸಿಗದೆ.

ನಾನೇಕೆ ಒಂಟಿ ಶಾಮಾ
ನಿನ್ನ ಕೊಳಲಿದ್ದೂ ನನ್ನ ಕೈಯಲ್ಲಿ
ತುಂಬು ನದಿಯ ಮುಂದೆ
ನೀರವವಾಗಿ ನಿಂತ ವಾದಕನಿಲ್ಲದ
ಬರಿ ವೀಣೆ ನಾನು ನಿಜ.
ನನ್ನೊಳಗೇ ಮಿಡಿವ ಧ್ವನಿ
ನನಗಲ್ಲದೆ ಬೇರೆ ಯಾರಿಗೆ ಕೇಳಬಹುದು.

ಹಾಲು ಮಾರಲು ಬರುವ ರಾಧೆ ನಾನು
ಮಾರಿಕೊಂಡಿದ್ದೇನೆ ನಿನಗೆ ನಾ ಅರಿವಿಲ್ಲದಂತೆ
ಎಂದೋ ಸನ್ಮಾನಿಸುವುದು ಈ ಲೋಕ
ನಿನ್ನೊಂದಿಗಿನ ರಾಧೆ ನಾನೆಂದು
ನನ್ನೊಂದಿಗಿನ ರಾಧೇಯ ನೀನೆಂದು.
ನಾನಿಲ್ಲದೆ ನೀನೆಲ್ಲಿ ಶಾಮಾ,
ಈ ವನವಲ್ಲಿ, ಹರಿವ ಈ ಯಮುನೆಯೆಲ್ಲಿ?

ನಿನಗೂ ಗೊತ್ತಿದೆ ಶಾಮಾ
ಎಲ್ಲ ಗೋಪಿಕೆಯರಂತಲ್ಲ ಈ ರಾಧೆ
ಎಲ್ಲ ಹೊಳೆವ ಲೋಕದ ಬಣ್ಣಗಳಿಂದ ಆಚೆ
ನಗ್ನಗೊಂಡಿದೆ ಈ ನನ್ನ ಮನ
ಎಂದೋ ಕೂಡಿಕೊಂಡಿದೆ ಅಲೆವ ಸ್ವಾತ್ಮವನ್ನು
ನಾ, ನೀ ಎಂಬ ಭೇದವಳಿದು
ಇದು ಆನಲ್ಲ, ನೀನಲ್ಲ
ಆನು ತಾನುಗಳ ಉಭಯ ಸಂಕಟ

ಗಂಡಸಿರುವ ಗರತಿ ನಾನು
ಎಲ್ಲರ ಹಾಗೆ ನಾನಿದ್ದೆ ನನ್ನ ರಾಯನ
ಹೊಸ್ತಿಲಿನ ಒಳಗೆ, ತಲೆ ಬಾಗಿದ ಹಸುವಿನಂತೆ.
ಇಂದು, ಬೇಕೆಂದೇ ತಪ್ಪಿದ್ದೇನೆ ಮನೆಯ ದಾರಿ
ಇದು ಒಂದು ದಿನದ ಹಸಿವೆಯಲ್ಲ
ದಿನದಿನವೂ ಕಾಯುತ್ತಿದ್ದೇನೆ
ಶಾಮಾ, ನಿನ್ನ ಹೆಜ್ಜೆ ದನಿಗಾಗಿ
ನನಗೆ ಗೊತ್ತಿದೆ, ನೀನು ಬಂದೇ ಬರುತ್ತೀಯ
ಕಾಣದ ಕತ್ತಲಲ್ಲಿ ಕರಗಿ ಹೋದರೂ
ನಿನ್ನ ಇರುವಿಕೆಯನ್ನು
ಈ ಪುಲಕಿತ ಮೈ ಸಾರುತ್ತಿದೆ.

ನೀನಿಲ್ಲದೆ ಇರುವ ಈ ತಮಾಲ ಛಾಯೆ
ಯಾವುದಕ್ಕೆ ಸೊಗಸಿದೆ ಹೇಳು
ನಿನ್ನ ಬೆರಳ ಮಾಂತ್ರಿಕ ಸ್ಪರ್ಶವಿಲ್ಲದೆ,
ರೊಚ್ಚಿಗೆಬ್ಬಿಸುವ ಕೊಳಲ ಗಾನವಿಲ್ಲದೆ
ಇಲ್ಲಿ ಯಾವುದು ಜೀವಂತ.
ಜೀವವಿಲ್ಲದ ಜಗತ್ತಿನಲ್ಲಿ
ಶಾಮಾ, ಜೀವವೆಂದರೆ ಯಾವುದು
ಕಾಯವೆಂದರೆ ಯಾವುದು
ಯಾವುದ ಹಿಡಿದು ನಿನ್ನ ಸೇರಲಿ.

ಗಾಳಿಕೊಳಲು ಪಿಸುಗುಡುತ್ತಿದೆ ಇಷ್ಟಕ್ಕಿಷ್ಟಂತೆ
ಮೈಯೆಲ್ಲಾ ಕಿವಿಯಾಗಿಸಿ ಆಲಿಸಿದೆ
'ರಾಧೆ, ಏ ರಾಧೆ' ಯಾವುದಿದು
ಎದೆಯ ಒಳಗೆ ತೊಟ್ಟಿಕ್ಕುವ ಹಾಡು.

ಹರಿಯುತ್ತಿದ್ದಾಳೆ ನಿಶ್ಚಿಂತ ಯಮುನೆ ಸುಮ್ಮನೆ
ಅರ್ಥವಾಗಲಿಲ್ಲವೇ ಶಾಮಾ, ನಿನಗೆ?
ಹರಿವ ಭಾವಗಳಿಗೆ ಒಡ್ಡು ಕಟ್ಟದಿದ್ದರೆ
ಹರಿದು ಹಂಚಿಹೋಗುತ್ತೇನೆ ನಾನು
ಮೈಯ ಕಣ, ಕಣವೂ ಕೂಗುತ್ತಿದೆ
'ಶಾಮಾ, ಓ ಶಾಮಾ'.

ತಡವಾಗುತ್ತಿದೆ ನನಗೆ
ಈ ಯಮುನೆ, ಈ ಕೊಳಲು
ಎಲ್ಲವನ್ನೂ ಪಕ್ಕಕ್ಕಿರಿಸಿ
ಸೇರಬೇಕಿದೆ ನನ್ನ ಮನೆಯ
ನೀನಂದು ಹೊರಟ ನನ್ನ ತಡೆದಿದ್ದೆ
ಸೆರಗ ಬಿಡದೆ ಕಾಡಿದ್ದೆ
ಗದರಿದಳು ಅತ್ತೆ, ಕತ್ತಲಲ್ಲಿ ಹೊರಗೆ
ಗರತಿಗೇನು ಕೆಲಸ?
ಮಾವ ಮುಖ ದಪ್ಪಮಾಡಿಕೊಂಡ

ಮಗ್ಗುಲಲಿ ಮಲಗಿದ ಗಂಡ
ಮುಖ ಗಂಟಿಟ್ಟುಕೊಂಡ
ಸಾಕ್ಷಿ ಹುಡುಕಿದ ನನ್ನ ಕತ್ತಲೆಯ
ನಡಿಗೆಗೆ, ಶಾಮಾ, ಅರ್ಥವಾಗುತ್ತಿದೆಯೇ ನಿನಗೆ
ನನ್ನೊಳಗೆ ಹೊರಳುವ ನೀನು,
ನಿನ್ನ ನಗು ಹೊರಬರುವುದಿಲ್ಲವೇಕೆ
ನಿನ್ನ ಕೂಡಿದ ನನಗೆ ಯಾವುದರ ಹಂಗು
ಬರಿಯ ಬಯಲು ನಾನು

ಬಯಲಲ್ಲಿ ಅಲೆವ ಗಾಳಿಕೊಳಲು ನೀನು
ನಾನೇ ಕೊಳಲಾಗಿದ್ದೇನೆ
ನಿನ್ನ ನೀಳ ಬೆರಳುಗಳಲ್ಲಿ
ಯಾಕೆ ಕಟ್ಟು ವಿಧಿಸುತ್ತಾರೆ ಇವರು
ನನ್ನಿಂದ ನಿನ್ನ ದೂರ ಸರಿಸಿ
ಗೂಟ ಕಿತ್ತ ಹಸು ನಾನು
ಕಂದಮ್ಮನಿಗೆಂಬಂತೆ ನಿನ್ನ ಬಳಿ
ಓಡಿ ಬರುತ್ತೇನೆ

ಅದೆ ಹುಣ್ಣಿಮೆ, ಅದೇ ಕೊಲುವ ಕೇದಿಗೆ
ಅದೇ ನಗುವ ಚಂದ್ರನ ಬೆಳಕು.

ಹಗುರಲ್ಲಿ ಹಗುರಾಗಿ
ತೇಲುವ ಶಾಮಾ ನೀನೊಂದು ಒಗಟು
ಈ ದೇಹದ ತುಂಬಾ ಪಿಸುಗುಡುತ್ತೀಯ
'ರಾಧೆ, ಏ ರಾಧೆ', ಸಾಕ್ಷಿಯಿಲ್ಲದ ಕರಗಿ ಹೋಗುತ್ತಾ
ಮಣ್ಣ ಕಣ ಕಣದಲ್ಲಿ ಅಡಗಿ ಹೋದ ಖನಿಜ ನಾನು
ಕಣ, ಕಣವೂ ಕೂಡಿಸುವ ಶಿಲ್ಪಿ ನೀನು.

ಎಲ್ಲಾ ಬಯಲಲ್ಲಿ ಅರಳಿದ
ಹೂಗಳ ಮೇಲೆ ಬಾಗಿ, ಮೋಡಮೈಯ್ಯಾಗಿಸಿ
ಚುಂಬಿಸಿ ಸುತ್ತಿ ಸೆಳೆದೊಯ್ವ ಜಾಲಗಾರ ನೀನು
ಇಲ್ಲೇನಿದೆ ಇನ್ನು ಮುಸ್ಸಂಜೆಯಲ್ಲಿ
ನೆಲಕ್ಕೆ ಬೀಳುವ ಹೂವಿನ ಶವ
ಧ್ವನಿಯಿಲ್ಲದ ಹಕ್ಕಿಗಳ ಹರಿದ ಹಾಡು

ಕುದಿವ ಕಾತರದಲ್ಲಿ
ಮೈ ಮರೆತ ಗೋಪಿಕೆಯರ ಕೇಳಿದೆ
'ಎಲ್ಲಿ ನನ್ನ ಶಾಮ, ಶಾಮನೆಲ್ಲಿ ಅವನು'
ತಮ್ಮ ಎದೆಯಲ್ಲಿ ಅಡಗಿದ ನಿನ್ನನ್ನು ತೋರಿ
ನಕ್ಕರು ಅವರು ಹಾಡೆನ್ನುವಂತೆ.
'ರಾಧೆಯೆಂದರೆ ಶಾಮ
ಶಾಮನೆಂದರೆ ರಾಧೆ'
ನನ್ನಲ್ಲಿ ಅಡಗಿ ನಗುವ ನಿನ್ನನ್ನು
ಹೇಗೆ ತೋರಲಿ ನಾನು ಅವರಿಗೆ.

ಎಲ್ಲಿ ನಿನ್ನ ನವಿಲಗರಿ
ಎಲ್ಲಿ ನಿನ್ನ ನೀಲಕಾಯ
ನೀಲಾಗಸದ ನೆರಳಲ್ಲಿ
ಎಲ್ಲಕ್ಕೂ ನೀಲಛಾಯೆ
ಎಲ್ಲೋ ಜಾರಿದೆ ನಿನ್ನ ಮನ
ನನ್ನ ಕಾಣುವ ಮೊದಲೇ
ಮಂಕುಮಡಿದಿದೆ ನನ್ನದೆಯ ನಕ್ಷತ್ರಗಳಿಗೆ
ತಪ್ಪಾಡುತ್ತಿವೆ ಅವು ಒಳಗೊಳಗೇ ಪೆದ್ದ ಕೂಸುಗಳಂತೆ

ನಿನಗೆ ಎಷ್ಟೊಂದು ಮುಖಗಳು, ಏ ಶಾಮಾ
ಎಷ್ಟೊಂದು ನನ್ನನ್ಣಕಿಸುವ ನವಿಲ ಕಣ್ಣುಗಳು.

ಶಾಮಾ, ಏ ಶಾಮಾ
ವಿವರಿಸು ನನಗೆ ಅರ್ಥವಾಗುವಂತೆ
ಕೂಡುವ, ಕಾಡುವ ಹಂಬಲಿಕೆಯನ್ನು
ಕಾಣಲೆಂದು ಕಣ್ಣ ಹಂಬಲಿಸುತ್ತದೆ
ಹಂಬಲಿಸಿದ ನಂತರ ಹಿಡಿಯಲು ಯತ್ನಿಸುತ್ತದೆ
ಯಾವಾಗಲೂ ನೀನೇಕೆ
ಶರೀರ, ಛಾಯೆಗಳ ನಡುವೆ ಮಾಯೆಯಾಗಿ ಕಾಡುತ್ತಿ?
ಎಲ್ಲ ಗೋಪಿಕೆಯರಂತೆ ನಾನಲ್ಲ
ಯಮುನೆಯೊಂದಿಗೆ ಬೆರೆತು
ನಿನ್ನೆದೆಯ ಗೂಡೊಳಗೆ ಕಾವುಕೂತ
ಮರಿ ಗುಬ್ಬಿ ನಾನು.

ಸುತ್ತ ಎಳೆದ ಎಲ್ಲಾ ರೇಖೆಗಳ
ಆಕಾರ ಬೇರೆಯಾದರೂ ಅವು
ಅದೇ ಲಕ್ಷ್ಮಣರೇಖೆಗಳೇ
ದಾಟಲಾರೆ, ದಾಟಬಹುದಾದರೂ
ಬೇಕೆಂದೆ ಬಚ್ಚಿಟ್ಟುಕೊಂಡಿದ್ದೇನೆ
ಕತ್ತಲಾಗದ ನನ್ನ ಜಗತ್ತಿನಲ್ಲಿ
ಅಸಂಖ್ಯಾತ ಉರಿವ ಸೂರ್ಯರು
ಹೊಳೆವ ನಕ್ಷತ್ರ ನೀಹಾರಿಕೆಗಳು
ನಡುವೆ ಅಲ್ಲಲ್ಲಿ ನೀನು ಚಿಮುಕಿಯಂತೆ
ಹೊಳೆಯುತ್ತಾ,
ಕರೆದು ಎತ್ತಿಕೋ ನಿನ್ನ ಕೈಯಲ್ಲಿ
ನಾನು ನೀನೆಂಬ ಉಭಯವಳಿದು
ಶಾಮನಿಂದ ರಾಧೆ, ರಾಧೆಯಿಂದ ಶಾಮ
ರಾಧೇಶಾಮನೆಂಬ ಹೊಸ ಪದ ಮೂಡಿ
ಆ ಜಗತ್ತಿನಲ್ಲಿ ಕೂಡುತ್ತೇನೆ ನಿನ್ನನ್ನು
ಕಂಕಣ, ಕಾಲಂದುಗೆ ಕಳಚಿ ನಿನ್ನ ನವವಧುವಾಗಿ

ಡಾ। ಎಚ್. ಎಲ್. ಪುಷ್ಪ, ೩೭/೨,ಎ, 'ನಿಸರ್ಗ' ನಾಗರಬಾವಿ ರಸ್ತೆ, ವಿಜಯನಗರ
ಬೆಂಗಳೂರು - ೫೬೦ ೦೪೦

## ಜಿ. ಪಿ. ಬಸವರಾಜರ ಮೂರು ಕವಿತೆಗಳು

### ಹಕ್ಕಿಯೆಂಬ ಮರುಳು

ಮೌನವೇ ಸುತ್ತುವರಿದಿರುವ
ಇಲ್ಲಿ
ಮೌನವೇ ಧ್ಯಾನ
ಮೌನವೇ ಮಾತು
ಮೌನವೇ ಚಲನೆ.

ಹೆಜ್ಜೆ ಸದ್ದಾಗದಂತೆ ಬಂದವರು
ಕಣ್ಣಲ್ಲೆ ಮಾತನಾಡಿ ಬಂದವರು
ಮಾತಿನ ಹೊರೆ ಕೆಳಗಿಟ್ಟು ಬಂದವರು
ಎಲ್ಲ ಹೊರಗಿಟ್ಟು ಬರಿದಾಗಿ ಬಂದವರು

-ಎಲ್ಲರೂ ನೋಡಿದರು:

ಭೂಮಿಯ ಗೋಳಾಕಾರ
ಸುತ್ತ
ಧುಮುಗುಡುವ ಹಸಿರು
ಎಲ್ಲೆಲ್ಲು ಮೌನ.

ಏನನ್ನೋ ಹುಡುಕುತ್ತ
ಏನನ್ನೋ ಧ್ಯಾನಿಸುತ್ತ
ಏನನ್ನೋ ನೆನೆಯುತ್ತ
ನಿಶ್ಚಲವಾಗಿ ನಿಂತವರ
ಕಲಕಿತ್ತೊಂದು ದನಿ.

ಹಸಿರ ನಡುವಿಂದ
ಒಡೆದು ಮೂಡಿದ
ಕರೆ

ಆಹಾ! ಹಕ್ಕಿ
ನೀನೆಲ್ಲಿ
ಹಸಿರ ನಡುವಲ್ಲೆ?
ನನ್ನ ಎದೆಯಲ್ಲೆ?

ದನಿಗೆ ದನಿ
ಪ್ರತಿಧ್ವನಿ
ಒಳಗೋ ಹೊರಗೋ
ಅರಿಯದ ಭ್ರಮೆ!

ಹಾಡು ಹಾಡೆಲೆ ಹಕ್ಕಿ
ಕೇಳುತ್ತಿರಲು
ನಿನ್ನ ದನಿ, ಪ್ರತಿಧ್ವನಿ

ಆ
ಧ್ವನಿ ತರಂಗದಲಿ
ತೇಲುತ್ತಿರಲಿ
ಚರಾಚರವೆಲ್ಲ
ಜಗವೆಲ್ಲ

೨
ದಿನದ ಕೊನೆಯಲ್ಲಿ
ದಳ ಮುಚ್ಚಿದ
ಅರವಿಂದ
ಕೆನೆಯ ನಿದ್ದೆಗೆ ತೆರಳಿದ್ದು
ಈ ಗೋಳದಲ್ಲೇ.

ಸಾಲು ಸಾಲು ಬಂದವರು
ಮೌನದ ಬಸಿರು
ಗೋಳವ ಹೊಕ್ಕು
ಮೆಟ್ಟಿಲು ಮೆಟ್ಟಿಲು ಏರುತ್ತ
ಹಂತಹಂತಗಳ ದಾಟಿದರೆ

ಅರವಿಂದ
ನೀನೇಕೆ ಕಾಣುತ್ತಿಲ್ಲ

ಹೊಗೆ ಧೂಮ
ಕಣ್ಣಿಗೆ ಭ್ರಮೆಯ
ಅಂಜನ.

ಏಳುವ ಧೂಮದಲ್ಲಿ
ಅರವಿಂದ ಅರಳದೆ
ಹೊಗೆ ಸುತ್ತಿ ಸುತ್ತಿ
ಕಣ್ಣಿಗೆ ಕತ್ತಲೆ ಸುತ್ತಿ
ಮನಕೆ ಭ್ರಮೆ ಸುತ್ತಿ
ಬಂಧನವ ಕಳಚಲಾರದೆ ಚಡಪಡಿಕೆ.

ಕೊನೆಗೊಮ್ಮೆ
ಹೊರಬಂದು
ಹೊರೆ ಕಳಚಿ
ಉಸಿರಾಡಿ
ತೆರೆದ ಬಯಲನು
ನೋಡಿದರೆ
ಮತ್ತೆ ಮತ್ತೆ
ಕರೆಯುವ ಕೊರಳು
ಹಕ್ಕಿಯೆಂಬ ಮರುಳು.

## ಏಕಾಗ್ರತೆಯ ಗಂಟೆ

ಹೇ ಗುರುವೆ.
ಧ್ಯಾನದ
ಶಿಖರದ ಮೇಲೆ ಕುಳಿತಿದ್ದೇನೆ;
ಏಕಾಗ್ರತೆಗಾಗಿ
ನೀನು ಕಟ್ಟಿದ ಗಂಟೆ
ಬಾರಿಸುತ್ತಲೇ ಇದೆ-
ಗಾಳಿ ಸುಳಿದಂತೆಲ್ಲ.

ಗಂಟೆಯ ನಾದದ
ಓಂಕಾರಕ್ಕೆ

ಕಿವಿ ತೆರೆದಿದ್ದೇನೆ
ಮನ ತೆರೆದಿದ್ದೇನೆ
ಎದೆ ತೆರೆದಿದ್ದೇನೆ.

ಎಲ್ಲವನು ದಾಟಿ ಬರುತಿದೆ
ಆಷಾಢ ಗಾಳಿಯ
ಬೋರಿಡುವ ಸದ್ದು.

ಹೊರಗೆ
ಅಂಗಳದಲ್ಲಿ
ನೀರಡಿಸಿ ಬಂದಿದೆ ಹಸು
ಜೊತೆಯಲ್ಲಿದೆ ಕರು
ಎಲ್ಲೆಲು ಮೊರೆಯುತ್ತಿದೆ
ಅಂಬಾ ಅಂಬಾ ಕರೆ.

ಹೇಗೆ ನಿನ್ನ
ಓಂಕಾರದಲ್ಲಿ
ಮೈಮರೆಯಲಿ ಗುರುವೆ?

ಹೊತ್ತಿಗೆ ಸರಿಯಾಗಿ
ಬಂದಿದೆ ಹಕ್ಕಿ
ಪ್ರಿಯಕರನ ಜೊತೆಯಲ್ಲಿ
ಮರದ ಟೊಂಗೆಯು
ತೂಗುತ್ತಿದೆ ಜೋಕಾಲಿ

ಗಂಡು ಹೆಣ್ಣಿನ
ರಾಗ ರತಿ,
ಸಂಜೆ ಸೂರ್ಯನ
ಬಣ್ಣದೋಕುಳಿ.
ಬಾನ ವಿಸ್ತಾರಕೆ ಚೆಲ್ಲಾಡಿವೆ.

ಸಂಜೆ ಚಿಕ್ಕೆಗಳೆಲ್ಲ ನಕ್ಕು
ದಿಕ್ಕು ದಿಕ್ಕುಗಳಿಂದ
ಇಳಿಯುತ್ತಿದೆ ಕತ್ತಲೆ.

ಕಣ್ಮುಚ್ಚಿದರೆ ಬಿಚ್ಚಿಕೊಳ್ಳುತ್ತಿವೆ
ನೂರಾರು ಚಿತ್ರಗಳು
ಕಿವಿ ಮುಚ್ಚಿದರೆ ಕೇಳುತ್ತಿವೆ

ನೂರಾರು ಶಬ್ದಗಳು

ಇದೇ ಈಗ ಬಿದ್ದ
ಮಳೆಗೆ ಎದ್ದ
ಮಣ್ಣಿನ ವಾಸನೆ
ತುಂಬುತ್ತಿದೆ ವಾಯುಮಂಡಲವ.

ಹೇ ಗುರುವೆ
ಹೇಳು:
ನಿನ್ನ ಏಕಾಗ್ರತೆಯ
ಗಂಟೆ
ಎಲ್ಲಿ ಬಾರಿಸುತ್ತಿದೆ
ಎಂಥ ನಾದ
ಏಳಿಸುತ್ತಿದೆ?

## ಹೇಳು ಈ ನೆಲದ ನಂಟೆ?

ಎತ್ತಲೋ ಹಾರಿದ
ಹಕ್ಕಿ ಕೊಕ್ಕಿಂದ
ಜಾರಿ ಬಿದ್ದ ಬೀಜ
ನೆಲದೊಡಲ ಸೇರಿದ್ದು.

ಮುಗಿಲು ಫಲಿಸಿ
ಮೋಡ ಸಿಡಿಸಿದ
ನಾಲ್ಕು ಹನಿ
ಕಾದ ನೆಲದ
ತಾಪ ತಣಿಸಿ
ಹಸಿರು ನಕ್ಕ ಪ್ರೀತಿ
ಹೊಸ ಜೀವ ಪಲ್ಲವಿಸಿ.

ಹೇಳು ಎತ್ತ ಮುಗಿಲು
ಎತ್ತ ನೆಲ
ಎತ್ತಣಿಂದೆತ್ತ ಹಕ್ಕಿ
ಬೀಜ?

ಕೂಡಿ ಒಡಲು
ಪ್ರೀತಿ ಕಡಲು

ಬೆಸೆದ ಬಂಧ
ನೆಲ-ಮುಗಿಲ ಸಂಬಂಧ.

೨

ಜಾತಿ ಜಾತಿಗಳ ತಂದು
ಪ್ರೀತಿಯನ್ನೆ ಹೊಸಕುವ
ಹುನ್ನಾರ
ಹೇಳು
ಈ ನೆಲದ ನಂಟೆ?

ಜಿ.ಪಿ. ಬಸವರಾಜು, ನಂ-೧೦, ವಾಸು ಲೇ ಔಟ್, ರಂಗರಾವ್ ಕಾಲೋನಿ
ರಾಮಕೃಷ್ಣನಗರ 'ಕೆ' ಬ್ಲಾಕ್, ಮೈಸೂರು- ೫೭೦೦೨೩

# ಶಿಖಂಡಿ ರಾಜಕಾರಣ : ಒಂದು ಟಿಪ್ಪಣಿ

**ಶಿವರಾಮಯ್ಯ**

ಮಾಜಿ ವಿಶ್ವಶಿಖಂಡಿ ಸುಂದರಿ ಸುರಯ್ಯಾ ನಾಯಕ್ ಎಂಬ ವ್ಯಕ್ತಿ ಭೋಪಾಲ್‌ನಲ್ಲಿ ರಾಷ್ಟ್ರೀಯ ಕ್ರಾಂತಿ ಪಕ್ಷದ ಕಲ್ಯಾಣ್‌ಸಿಂಗ್ ಅವರನ್ನು ಭೇಟಿಮಾಡಿ ಮುಂಬರುವ ವಿಧಾನಸಭಾ ಚುನಾವಣೆಯಲ್ಲಿ ತಾನು ಸ್ಪರ್ಧಿಸಲು ಟಿಕೆಟ್‌ಗಾಗಿ ಕೋರಿ ಅರ್ಜಿ ಸಲ್ಲಿಸುತ್ತಿರುವ ಸುದ್ದಿಚಿತ್ರ ದಿನಪತ್ರಿಕೆಗಳಲ್ಲಿ ಬಂದಿದೆ. 'ಇದೇನು ದುನಿಯಾ ಬದಲ್‌ಗಯಾ' ಎಂದು ಸಂಪ್ರದಾಯವಾದಿಗಳು ಹುಬ್ಬೇರಿಸಬಹುದು. ಆದರೆ ಇದುವರೆಗೆ ಜನಹಿತಮಾಡದೆ, ಗೆದ್ದು ಬಂದ ಮಣೆಯನ್ನು ಒದ್ದು ಶಿಖಂಡಿಗಳಂತೆ ವರ್ತಿಸುವ ನಮ್ಮ ರಾಜಕಾರಣಿಗಳಿಗೆ ಇದು, ಒಂದು ಮುನ್ನೆಚ್ಚರಿಕೆಯ ಗಂಟೆಯೂ ಆಗಿದೆ. ಯಾಕೆಂದರೆ ಸಂಖ್ಯೆಯಲ್ಲಿ ಗಂಡಸರಿಗೆ ಸಮ ಸಮ ಇರುವ ಮಹಿಳೆಯರಿಗೆ ಶೇ ೩೩ ಮೀಸಲಾತಿ ಸೀಟುಗಳನ್ನು ನೀಡುವುದಕ್ಕೂ ಈ ಪ್ರವೃತ್ತಿಗಳು ಇನ್ನೂ ಮೀನಮೇಷಾ ಎಣಿಸುತ್ತಿರುವಾಗ ಲೈಂಗಿಕ ಅಲ್ಪಸಂಖ್ಯಾತರಾದ ಶಿಖಂಡಿಗಳನ್ನು ಯಾರು ತಾನೆ ಕೇಳಬೇಕು? ಇಂಥ ಸಂದರ್ಭದಲ್ಲಿ ಇವರು ಸಂಘಟಿತರಾಗಿ ರಾಜಕೀಯಕ್ಕೆ ಧುಮುಕುವುದು ಅನಿವಾರ್ಯವಾಗಿದೆ. ಆದ್ದರಿಂದ ಶಿಖಂಡಿ ಜನ ಚುನಾವಣಾ ಕಣಕ್ಕೆ ಇಳಿಯುವುದೂ, ಗೆದ್ದು ತಮ್ಮವರ ಪರವಾಗಿ ಹಕ್ಕೊತ್ತಾಯಗಳನ್ನು ಮಂಡಿಸಿ ರಾಜ್ಯಾಂಗ ಬದ್ಧ ಸವಲತ್ತುಗಳಿಗೆ ಹೋರಾಡುವುದೂ ನ್ಯಾಯ ಬದ್ಧವೇ. ಈ ನಿಟ್ಟಿನಲ್ಲಿ ಪಾಶ್ಚಾತ್ಯ ರಾಷ್ಟ್ರಗಳು ಇವರ ನ್ಯಾಯಬದ್ಧ ಬೇಡಿಕೆಗಳನ್ನು ಮನ್ನಿಸಿ ಕಾನೂನು ಕ್ರಮಗಳನ್ನು ಕೈಗೊಂಡಿವೆ. ಸಲಿಂಗ ಕಾಮಿಗಳು ವಿವಾಹವಾಗಬಹುದು ಮತ್ತು ಆಸ್ತಿಯಲ್ಲಿ ಅವರಿಗೂ ಹಕ್ಕುಂಟು ಮುಂತಾದ ಪ್ರಗತಿಪರ ಕಾನೂನುಗಳು ಅಮೆರಿಕದಲ್ಲಿ ಊರ್ಜಿತವಾಗುತ್ತಿವೆ. ಈ ಹಿನ್ನೆಲೆಯಿಂದ ನೋಡಿದರೆ ಸುರಯ್ಯಾನಾಯಕ್ ಚುನಾವಣೆಗೆ ಸ್ಪರ್ಧಿಸಲು ಹೊರಟಿರುವುದು ಸ್ವಾಗತಾರ್ಹ ಕ್ರಮವೇ.

ಹಾಗೆ ನೋಡಿದರೆ ಶಿಖಂಡಿಗಳ ಬದುಕು ಅಂತರ್ ಪಿಶಾಚಿಯಂತಹ ಬದುಕಾಗಿದೆ. ಅವರೂ ಸಹ ಮನುಷ್ಯರು. ಲಿಂಗ ವಿವಕ್ಷೆ ಎಂಬುದು ಕೇವಲ ಜೈವಿಕ ಆಕಸ್ಮಿಕ. ಹುಟ್ಟುವ ಮೊದಲೇ ಗಂಡೋ, ಹೆಣ್ಣೋ ಅಥವಾ ಶಿಖಂಡಿಯೋ ಆಗಬೇಕೆಂದು ಯಾರೂ ಅರ್ಜಿ ಹಾಕಿಹುಟ್ಟಲಿಲ್ಲ. ಶಿಖಂಡಿಗಳು ಹುಟ್ಟುತ್ತಲೇ ತಮ್ಮ ಹಾರ್ಮೋನುಗಳ ನ್ಯೂನತೆಯಿಂದ ಹೆಣ್ಣಿಗರಾದವರು. ಅವರು

ಪ್ರೌಢಾವಸ್ಥೆಗೆ ಬರುತ್ತಿದ್ದಂತೆಯೇ ಮಾನಸಿಕ ತಳಮಳಕ್ಕೆ ಈಡಾಗುತ್ತಾರೆ. ಇಂಥವರು ಪುರುಷರೊಂದಿಗೆ ಬಾಳುವಂತಿಲ್ಲ, ಸ್ತ್ರೀಯರ ನಡುವೆ ಸೇರುವಂತಿಲ್ಲ. ಸಮಾಜ ಇವರನ್ನು ನಪುಂಸಕರು, ಷಂಡರು, ಖೋಜಾಗಳು, ಹಿಜಡಾಗಳು, ಸಲಿಂಗಕಾಮಿಗಳು ಮುಂತಾಗಿ ಹೆಸರಿಸಿ ಅಸಹ್ಯ ಪಡುವುದು. ಸಾಮಾಜಿಕವಾದ ಕೀಳರಿಮೆ ಅವರನ್ನು ಸದಾ ಕಾಡುತ್ತಿರುತ್ತದೆ. ಈ ಕೀಳರಿಮೆಯ ಪರಮಾವಧಿ ಬೈಗುಳವೆಂದರೆ ರಣಹೇಡಿಗಂಡಸರನ್ನೂ **ಷಂಡರೆಂದೇ** ಹಿಯ್ಯಾಳಿಸುವುದು. ನಮ್ಮ ಪುರಾಣ ಕಾವ್ಯ, ಇತಿಹಾಸಗಳನ್ನು ತಿರುವಿದರೆ ಇದಕ್ಕೆ ಸಾಕಷ್ಟು ನಿದರ್ಶನಗಳು ದೊರೆಯುತ್ತದೆ.

ಆದ್ದರಿಂದ ಪುರುಷಪ್ರಧಾನ ಸಂಸ್ಕೃತಿಯ ಸಾಕಾರವಾಗಿರುವ ನಮ್ಮ ರಾಮಾಯಣ ಮಹಾಭಾರತಗಳಿಂದ ಕೆಲವು ಪ್ರಸಂಗಗಳನ್ನು ಇಲ್ಲಿ ಉಲ್ಲೇಖಿಸಬಹುದು. ಮೊದಲನೆಯದಾಗಿ ಮರ್ಯಾದಾಪುರುಷೋತ್ತಮನಾದ ಶ್ರೀರಾಮನೇ ತನ್ನ ಅರ್ಧಾಂಗಿ ಸೀತೆಯ ಶೀಲವನ್ನು ಶಂಕಿಸಿದ ಕಾರಣ ಅವಳು ಅಗ್ನಿ ಪ್ರವೇಶ ಮಾಡಬೇಕಾಯಿತು. ಎರಡನೆಯದಾಗಿ ಭೀಷ್ಮ ತಾನೇ ಸೆರೆಹಿಡಿದು ತಂದ ಹೆಣ್ಣು ಅಂಬೆಯನ್ನು ಲಗ್ನವಾಗದೆ ಹೋದುದರಿಂದ ಅವಳು ಚಿತೆ ಏರಿ ಸಾಯಬೇಕಾಯಿತು. ಈ ಕವನ ನಾಯಕರು ಸ್ವತಃ ಹೆಣ್ಣನ್ನು ಹಿಡಿದು ಬೆಂಕಿ ಹಚ್ಚಲಿಲ್ಲವಾದರೂ ಅವರು ತಾವಾಗಿಯೇ ಚಿತೆ ಏರುವುದಕ್ಕೆ ಇವರೇ ಕಾರಣರಾಗಿದ್ದಾರೆ. ಆಧುನಿಕ ಸ್ತ್ರೀವಾದಿ ವಿಮರ್ಶಕರು ಈ ಬಗ್ಗೆ ಸಾಕಷ್ಟು ವಾಗ್ವಾದಗಳನ್ನು ಎತ್ತಿದ್ದಾರೆ. ಆದರೆ ಶಿಖಂಡಿಗಳ ಬಗ್ಗೆ ಮಾತ್ರ ಇಂಥ ಗಂಭೀರ ಚರ್ಚೆ ಇನ್ನೂ ನಡೆದಂತಿಲ್ಲ.

ಮಹಾಭಾರತದಲ್ಲಿ ಶಿಖಂಡಿ ಬಗೆಗಿನ ಲೈಂಗಿಕ ರಾಜಕಾರಣ ಕಥೆಯ ದಿಕ್ಕು ದೆಸೆಯನ್ನು ಪಲ್ಲಟಗೊಳಿಸುವಷ್ಟು ಸಮರ್ಥವಾಗಿದೆ. ಆಜನ್ಮ ಬ್ರಹ್ಮಚಾರಿಯಾದ ಭೀಷ್ಮನ ಪ್ರತಿಜ್ಞೆ ಎಂಬುದು ನಾಣ್ಣುಡಿಯಾಗಿದೆ. ಆದರೆ ಅವನ ಪ್ರತಿಜ್ಞೆ ಯಾವ ಪುರುಷಾರ್ಥಕ್ಕೆ ಎಂಬುದೇ ತಿಳಿಯುತ್ತಿಲ್ಲ. ಒಂದು ರೀತಿಯಲ್ಲಿ ನೋಡಿದರೆ ಅವನು ಬ್ರಹ್ಮಚಾರಿಯಾಗಿ ಉಳಿದದ್ದೇ ಕುರುಕುಲ ನಾಶಕ್ಕೆ ನಾಂದಿ ಎಂಬಂತಿದೆ. ಅವನ ಅಕಾಲಿಕ ಬ್ರಹ್ಮಚರ್ಯವ್ರತ ಅವನನ್ನಲ್ಲದೇ ಅವನ ಸುತ್ತಣ ಸಮೂಹಗಳನ್ನೂ ಬಲಿ ತೆಗೆದುಕೊಳ್ಳುತ್ತದೆ. ಹಿಂದೆ ಹೆಣ್ಣನ್ನು **ಪರಿಗ್ರಹಿಸಲಾರೆ** ಎಂದವನು ಕುರುಕ್ಷೇತ್ರದಲ್ಲಿ ಅದೇ ಅಂಬೆ ಶಿಖಂಡಿಯಾಗಿ ಎದುರುನಿಂತಾಗ **ವಧಿಸಲಾರೆ** ಎಂದು ಶಸ್ತ್ರತ್ಯಾಗ ಮಾಡಿದನು. ಭೀಷ್ಮನ ಪುರುಷವ್ರತದ ಸೊಕ್ಕ (ego) ನ್ನು ತಮ್ಮ ಕಡೆಯ ವಿಜಯವನ್ನಾಗಿ ಪರಿವರ್ತಿಸಿಕೊಳ್ಳುವ ಪಾಂಡವರು ಲೈಂಗಿಕ ರಾಜಕಾರಣವನ್ನು ಸದ್ಬಳಕೆ ಮಾಡಿಕೊಂಡರಷ್ಟೆ. ಪ್ರಸ್ತುತ ಗಮನಿಸಬೇಕಾದ ಸೂಕ್ಷ್ಮವೆಂದರೆ ಭೀಷ್ಮ ಶಿಖಂಡಿಯೊಡನೆ ಯುದ್ಧಮಾಡುವುದಿಲ್ಲವೆಂಬ ನಿರ್ಧಾರ. ಇಲ್ಲಿರುವ ಪೌರಾಣಿಕ ಮುಸುಕು ಸರಿಸಿ ನೋಡಿದರೆ, ಶಿಖಂಡಿಯು ಗಂಡಿನೊಡನೆ ಯುದ್ಧ ಮಾಡುವುದಕ್ಕೆ ಅನರ್ಹಳು ಎಂಬ ಪುರುಷಾಧಿಪತ್ಯದ ಮೇಲ್ಮೆಯೇ ವಿಪರೀತವಾಗಿ ಕಾಣುತ್ತದೆ. ಭೀಷ್ಮನ ಬ್ರಹ್ಮಚರ್ಯದ ಭಯಾನಕ ಕ್ರೌರ್ಯವೇ ಶಿಖಂಡಿಯನ್ನು ಹೀಗೆ ಸಾರ್ವಜನಿಕವಾದ ಅಪಮಾನಕ್ಕೆ ಈಡು ಮಾಡುವುದು. ಈತ ಅಂಬೆಯ ಎದುರು ಒಮ್ಮೆಯೂ ಕ್ಷಮೆಯಾಚಿಸಲಿಲ್ಲ. ಅಂಥ ಗಂಡಗರ್ವ.

ತದ್ವಿರುದ್ಧವಾಗಿ ಊರ್ವಶಿಯ ಶಾಪ ಸಂದರ್ಭದಲ್ಲಿ ಶಿಖಂಡತ್ವದ ಲೈಂಗಿಕ ರಾಜಕಾರಣವು ಮತ್ತೊಂದು ಬಗೆಯಲ್ಲಿ ಗೋಚರವಾಗುತ್ತದೆ. ಒಲಿದು ಬಂದ ಊರ್ವಶಿಯನ್ನು ಅರ್ಜುನ ಕಾಮಿಸದೆ ಹೋದಾಗ ಅವಳು ಒಂದು ವರ್ಷದ ಅವಧಿಗೆ ನಪುಂಸಕನಾಗಿರು ಎಂದು ಅಭಿಶಾಪವಿತ್ತಳು.

ಅರ್ಜುನನಾದರೋ ಅದಕ್ಕೆ ಹೇಸದೆ ತನ್ನವರ ಪುರೋಭಿವೃದ್ಧಿಗೆ ಆ ಶಾಪವನ್ನೇ ಬಳಸಿಕೊಳ್ಳುತ್ತಾನೆ. ಬೃಹನ್ನಳೆಯಾಗಿ ವಿರಾಟನ ಮಗಳು ಉತ್ತರೆಗೆ ನಾಟ್ಯಾಚಾರ್ಯನಾಗಿದ್ದುಕೊಂಡು ತನ್ನ ಅಜ್ಞಾತವಾಸವನ್ನು ಮುಗಿಸುತ್ತಾನೆ. ಹೀಗೆ ಭೀಷ್ಮನ ಬ್ರಹ್ಮಚರ್ಯವ್ರತ ಹೆಣ್ಣನ್ನು ನಿರಾಕರಿಸುವ ಮೂಲಕ ಜೀವವಿರೋಧಿಯಾಗಿ ಕಡೆಗೆ ಶಿಖಂಡಿಗೆ ಸೋತು ಶರಶಯ್ಯಾಗತನನ್ನಾಗಿಸಿ ನರಳಿಸುತ್ತದೆ; ಅವನ ಮೊಮ್ಮಗ ಹೆಣ್ಣನ್ನು ನಿರಾಕರಿಸದೆ ಅವಳನ್ನು ಮಾತೃ ಸಮಾನ ಕಂಡು ಅವಳ ಅಭಿಶಾಪವಾದ ಶಿಖಂಡತ್ವದಿಂದಲೇ ಉದ್ಧಾರವಾದ ನಿದರ್ಶನ ಭಾರತ ಕಥೆಯಲ್ಲಿ ಧ್ವನಿತವಾಗುತ್ತದೆ. ಎಂದರೆ ಶಿಖಂಡಿ ಸಂಬಂಧವಾದ ಲೈಂಗಿಕ ರಾಜಕಾರಣ ಒಳ್ಳೆಯ ಹಾಗೂ ಕೆಟ್ಟ ಎರಡೂ ಮಾದರಿಗಳಿಗೆ ಭಾರತ ಕಥೆ ಆಕರವೆಂಬಂತಿದೆ.ಇವತ್ತಿನ ರಾಜಕಾರಣಕ್ಕೂ ಸಹ ಇವು ಅಪೂರ್ವಮಾದರಿಗಳೆನಿಸುತ್ತವೆ.

ಇನ್ನು ಇತಿಹಾಸದ ಕಾಲಕ್ಕೆ ಹೊರಳಿ ನೋಡಿದರೆ, ರಾಜ ಮಹಾರಾಜರು ಶಿಖಂಡಿಗಳನ್ನು ತಮ್ಮ ಅರಮನೆಯ ಅಂತಃಪುರಗಳಲ್ಲಿ ದ್ವಾರಪಾಲಕರನ್ನಾಗಿ ನೇಮಿಸಿಕೊಳ್ಳುತ್ತಿದ್ದರು. ಬಹುಪತ್ನೀವಲ್ಲಭರಾಗಿದ್ದ ರಾಜರು ಈ ನಿರಪಾಯ ಖೋಜಾಗಳನ್ನು ಕಾವಲಿಗೆ ನೇಮಿಸಿಕೊಳ್ಳುತ್ತಿದ್ದುದು ಅರ್ಥವತ್ತಾಗಿದೆ ಎಂದು ಬೇರೆ ಹೇಳಬೇಕಾಗಿಲ್ಲ. ಯಾಕೆಂದರೆ ಒಮ್ಮೊಮ್ಮೆ ವೀರ್ಯವತ್ತಾದ ಗಂಡಾಳುಗಳನ್ನು ಹಿಡಿದು ಅವರ ಬೀಜ ಒಡೆದು ಬಡಿಹೋರಿ(ಎತ್ತು)ಗಳನ್ನಾಗಿ ಮಾಡಿ ಅರಮನೆಯ ಕಾವಲಿಗೆ ನೇಮಿಸಿಕೊಳ್ಳುತ್ತಿದ್ದರೆಂದು ಮೊಗಲ ಕಾಲದ - ಇತಿಹಾಸ ಹೇಳುತ್ತದೆ.

ಸಾಹಿತ್ಯ, ಸಂಗೀತ, ನೃತ್ಯ ಕಲೆ ಶಿಖಂಡಿ ಜನರಿಂದ ಪ್ರವರ್ಧಮಾನಕ್ಕೆ ಬಂತೆಂಬುದೂ ನಿಜ. ಬದುಕಲು ಅನ್ಯಮಾರ್ಗವಿಲ್ಲದ ಈ ಜನ ಸುಕುಮಾರ ಸಾಹಿತ್ಯಾದಿಕಲೆಗಳಿಗೆ ಜೋತುಬಿದ್ದು ಅರಮನೆಗೆ ಬಂದು ಸೇರಿ ಉಪಜೀವನ ನಡೆಸುತ್ತಿದ್ದರೆಂಬುದು ವಾಸ್ತವ ಸಂಗತಿಯಾಗಿದೆ. ಅರ್ಜುನ ಬೃಹನ್ನಳೆ ವೇಷ ತೊಟ್ಟು ಉಪಜೀವನಕ್ಕಾಗಿ ವಿರಾಟನ ಅರಮನೆ ಹೊಕ್ಕಿದ್ದನ್ನು ಇಲ್ಲಿ ನೆನೆಯಬಹುದು. ವಿರಹಿ ಜನಕ್ಕೆ ಕುಂಟಣಿಯಾಗಿಯೂ ಶಿಖಂಡಿಗಳು ಉಪಕರಿಸಿದ್ದಾರೆ, ಅದಿರಲಿ.

ಆದರೆ ಈಗ ಕಾಲ ಬದಲಾಯಿತು. ಪ್ರಜಾಪ್ರಭುತ್ವ ನೆಲೆಯೂರಿದಂತೆ ಶ್ರೀಮಂತ ಅರಮನೆಗಳಲ್ಲಿ ಉಪಜೀವಿಸುತ್ತಿದ್ದ ಈ ಶಿಖಂಡಿ ಜನವರ್ಗ ಪ್ರಜಾಜನರ ಮಧ್ಯೆ ಬಂದು ನಿಲ್ಲುವಂತಾಯಿತು. ಸಾಮಾಜಿಕರ ಅಭಿರುಚಿ ಮೌಲ್ಯ ಬದಲಾದಂತೆ ಇವರೂ ಉಪೇಕ್ಷಿಸಲ್ಪಟ್ಟು ಅವಹೇಳನಕ್ಕೆ ಈಡಾಗುತ್ತಿದ್ದಾರೆ. ಅಲ್ಲದೆ ಸಲಿಂಗಕಾಮಿಗಳ, ಪುಂಡ ಪೋಕರಿಗಳಿಂದ ಲೈಂಗಿಕ ಶೋಷಣೆಗೂ ಇವರು ಗುರಿಯಾಗುತ್ತಿದ್ದಾರೆ. ಅತ್ತ ಅವರ ನಾಟ್ಯಾದಿ ಕಲೆಗಳಿಗೆ ಬೆಲೆ ಇಲ್ಲದೆ, ಇತ್ತ ಬೇರೆ ವೃತ್ತಿ ಕೌಶಲ ಗೊತ್ತಿಲ್ಲದೆ ಶಿಖಂಡಿಗಳ ಬದುಕು ತೀರ ಅತಂತ್ರವಾಗುತ್ತಿದೆ.

ಈ ಸಂದರ್ಭದಲ್ಲಿ ಇವರ ಸಮಾಜದಿಂದ ಮೂಡಿಬಂದ ಕೆಲವರಾದರೂ ಹಿತಚಿಂತಕರು ತಮ್ಮ ಅಂತರ ಪಿಶಾಚಿ ಸ್ಥಿತಿಯ ಬದುಕಿಗೆ ಮಂಗಳ ಹಾಡಲು ಸಂಘಸಂಸ್ಥೆಗಳನ್ನು ಕಟ್ಟಿಕೊಳ್ಳುವುದು ಅನಿವಾರ್ಯವಾಗಿ ಕಂಡುಬರುತ್ತಿದೆ. ಪ್ರಜಾಪ್ರಭುತ್ವದ ಅಡಿಪಾಯ ಸಂಘಟನೆ ತಾನೆ? ಆದ್ದರಿಂದ ಶಿಖಂಡಿಗಳೂ ಈ ದಿಸೆಯಲ್ಲಿ ಕಾರ್ಯತತ್ಪರರಾಗಿ ಚುನಾವಣೆಗಳಲ್ಲಿ ಸ್ಪರ್ಧಿಸಲು ಹೊರಟಿರುವುದು ಆರೋಗ್ಯಕರ ಮುನ್ನಡೆ.

ಇದೇ ಸಂದರ್ಭದಲ್ಲಿ ಸ್ತ್ರೀ-ಪುರುಷ ಮೇಲಾಟದ ಪೈಪೋಟಿಯಲ್ಲಿ ತೊಡಗಿರುವ ಸ್ತ್ರೀವಾದಿ

ಚಿಂತಕರು ಸಹ ಶಿಖಂಡಿ ಜನರ ಕರುಣಾಜನಕ ಸ್ಥಿತಿ-ಗತಿಯತ್ತ ತಮ್ಮ ಗಮನವನ್ನು ಹರಿಸಿ ಅವರ ಏಳ್ಗೆಗೂ ಶ್ರಮಿಸಬೇಕಾದ್ದು ತಮ್ಮ ಕರ್ತವ್ಯವೆಂದು ಭಾವಿಸುವುದು ಸೂಕ್ತ. ಈಗಾಗಲೇ ಪಾಶ್ಚಾತ್ಯ ದೇಶಗಳಲ್ಲಿ ಶಿಖಂಡಿ ಜನರ ಸ್ಥಾನಮಾನ ಎಷ್ಟೋ ಸುಧಾರಣೆಯನ್ನು ಕಂಡಿದೆ. ಆದ್ದರಿಂದ ನಮ್ಮಲ್ಲಿಯೂ ಇಂಥ ಅವಕಾಶಗಳು ಅವರಿಗೆ ದೊರೆಯಬೇಕು. ಇಂಥದ್ದಕ್ಕೆಲ್ಲ ಆರಂಭವೆಂಬಂತೆ ವಿಶ್ವಶಿಖಂಡಿ ಸುಂದರಿ ಸುರಯ್ಯಾ ನಾಯಕ್ ಅಂಥವರಿಗೆ ಚುನಾವಣೆಯಲ್ಲಿ ಸ್ಪರ್ಧಿಸಲು ಮೀಸಲು ಸ್ಥಾನಗಳನ್ನು ಕಾದಿರಿಸಬೇಕು. ಆಮೇಲೆ ಅವರ ಹಕ್ಕೊತ್ತಾಯಗಳನ್ನು ಶಾಸನಸಭೆಗಳು ಮನ್ನಿಸಬೇಕು. ಇವರು ಸ್ಪರ್ಧಿಸುವ ಚುನಾವಣಾ ಕ್ಷೇತ್ರದಲ್ಲಿ ಗಂಡಸರು ಸ್ಪರ್ದಿಸದೆ ಭೀಷ್ಮನಂತೆ ಹಿಂದೆ ಸರಿಯುವುದಾದರೆ ಅವರ ಸಾಮಾಜಿಕ ಸ್ಥಾನಮಾನ ಸುಧಾರಿಸುತ್ತದೆ. ಹಾಗೂ ರಾಜಕಾರಣಿಗಳಿಗೂ ಒಂದು ಘನತೆ ಬರುತ್ತದೆ. ಇಂಥ ಒಂದು ಸದಾಶಯ ನಮ್ಮ ರಾಜಕೀಯ ಷಡ್ಯಂತ್ರದಲ್ಲಿ ಕಾರ್ಯರೂಪಕ್ಕೆ ಬರುವುದುಂಟೆ?

●

---

ಶಿವರಾಮಯ್ಯ, ನಂ. ೧೭೨, ಐಸೆಕ್ ರೋಡ್, ನಾಗರ ಬಾವಿ.
ಬೆಂಗಳೂರು-೫೬೦೦೭೨

## ದು. ಸರಸ್ವತಿ : ಎರಡು ಕವಿತೆಗಳು

### ತಬ್ಬಲಿಗಳ ಜೋಗುಳ

'ಅಂತ' ರಂಗ
ಅಂತರ ಅಂಗ
ಅಂ ತರಂಗ
ತರಂಗಾಂತರಂಗ
ಬಾಗಿಲಿಲ್ಲ, ಕಿಟಕಿಯಿಲ್ಲ, ಕಿಂಡಿಯಿಲ್ಲ
ಒಳಗೆ
ಮುಳುಗಿ ಹೂತಿರುವುದೇನೊ?
ತೂಗುವ ಉಯ್ಯಾಲೆಯೊ
ಚಿಮ್ಮುವ ಹರಯವೊ
ಹಕ್ಕಿ ಹಾಡೊ
ಬೆಚ್ಚಗಿನ ಗೂಡೊ
ತೊಟ್ಟಿಲ ತೂಗೊ
ಬಟ್ಟಲು ಪ್ರೀತಿಯೊ
ಹಿತ್ತಲ ಮಲ್ಲಿಗೆಯೊ
ಕತ್ತಲ ಚುಕ್ಕಿಯೊ
ಯಾವುದೊ ಅಂತೂ ಮರೆತೇ ಹೋಗಿತ್ತು
ಅಲ್ಲೀಗ ಎಂತದೋ ಕೊರೆತ
ಒಮ್ಮೆ ಮೆಲ್ಲಗೆ ಹೂ ಅರಳಿದಂತೆ
ಒಮ್ಮೊಮ್ಮೆ ಹರಿತವಾಗಿ ಸೀಳಿದಂತೆ
ದಡಾರನೆ ಸಿಡಿಲು ಬಡಿದು

ಗಾರೆ ಬಿದ್ದು
ಬಟಾಬಯಲಾಗಿ
ಅಂತರಂಗವೆಲ್ಲ ಮಿಂಚುನುಗ್ಗಿ
ಒಳಗಿನ-
ಬರಡು ನವಿಲಿಗೆಂತದೊ ಕಸಿವಿಸಿ
ಉಸಿರುಗಟ್ಟಿಸಿದೆ
ಹಿಂದೊಮ್ಮೆ
ಮಿಂಚಿನ ಸಂಚಾರಕ್ಕೆ
ಚಿತ್ತಾರ ಬರೆದ ಹೆಜ್ಜೆಮಾಸಿ
ಕತ್ತಲಿಗೆ ಕಂಪಿಸಿದ್ದು
ನೆನಪಿನ ಚಿತ್ತವಲ್ಲಿ
ಹಚ್ಚ ಹಸಿರು

ಈ-
ಮಿಂಚೆಂಬ ಮಿಂಚಿನದೆಂತ ಸಂಚೊ?
ಸುಳಿದಷ್ಟೆ ಬೇಗನೆ
ತೊಲಗಿ ಹೋಗಬಾರದೆ
ಕತ್ತಲಲವಿತಾಗ
ಫಳಾರನೆ ಬಂದು ಸೀಳುವ
ಬೆಳ್ಳಂಬೆಳಕಿಗೆ ಚಾಚಿಕೊಳುವಾಗ
ಚಕ್ಕನೆ ಮಾಯವಾಗಿ
ಕತ್ತಲು ತುಂಬುವ
ಮಿಂಚಿನಾಟವೇನೊ?

ಆಟ ಬೇಡ
ಹೊಂಚುಹಾಕುವ ಬೇಟೆ ಬೇಡವೆಂದ
ನವಿಲು ಕವುಚಿ ಕೂತಿತು
ಗರಿ ಬಿಚ್ಚೆನೆಂದು
ಹೆಜ್ಜೆ ಹಾಕೆನೆಂದು
ರಂಗದ ಅಂತ ತಾನೆಂದು
ಜೂಗರಿಸಿ ತೂಕಡಿಸಿತು
ತೂಕಡಿಕೆಯಲಿ.....

ಪಕ್ಕನೆ ಸುಳಿವ
ಮಿಂಚುಬಳ್ಳಿಗಳ

ಚಕ್ಕನೆ ಹಿಡಿದು
ಸಿಂಬಿಸುತ್ತಿ
ಮೇಲೆ ಮಣ್ಣಗಡಿಗೆಯ ಹೊತ್ತು
ಮಳೆ ನೀರ ತುಂಬಿ
ಮೊಳಕೆಗೆ ಹನಿಸ ಹೊರಟ
ಆ ತಾಯೆಂಬ ಹೆಣ್ಣು
ಯಾರೆಂದು ಕೇಳೆ
ನಾ -
ಗಂಡನ ಹೆಂಡತಿಯಲ್ಲ
ಪ್ರಿಯನ ಪ್ರೇಯಸಿಯಲ್ಲ
ಬಸಿರಿನ ತಾಯಲ್ಲ
ತಬ್ಬಲಿಗಳ ಜೋಗುಳ
ಜೀವಕ್ಕೆ ಜೀವ ತಾನೆಂದು
ಜುಳುಜುಳು
ಹರಿದು ಹೋದಂ'ತಾಗಿ'
ನವಿಲು ಗರಿ ಬಿಚ್ಚುತ್ತಿತ್ತು.

## ಮಿನುಗು ಚಿಕ್ಕಿಗಳ ನಡುವೆ....

ಇಲ್ಲಿ
ಪುಟಾಣಿ ಹುಡುಗಿಯ
ಕಣ್ಣೊಳಗೆ ಬೆಳಗುವ ಚುಕ್ಕಿಗಳೇ
ಅಲ್ಲಿ
ಆಕಾಶದ ಬಯಲಲಿ
ಮಿನುಗುವುದೊಂದು ಸೋಜಿಗ!

ಕಣ್ಣ ಬೆಳಕನ್ನು
ಸೂರ್ಯ 'ಕದ್ದು'
ಒಂದ ಪತ್ತಾಗಿಸಿ
ಹತ್ತ ನೂರಾಗಿಸಿ
ಎಣಿಸಲಾರದಾಗಿಸಿ
ಆಕಾಶಕ್ಕೆ ತೊಡಿಸಿದನೆ?

ಅವ್ವಯ್ಯಾ
ಸೂರ್ಯನ 'ಬೇಡಿ'

ಎಣಿಸಲಾಗದ
ಚುಕ್ಕಿಗಳೊಳಗಿನ
ಮಿನುಗು ಬಿಡಿಸಿ
ಕಣ್ಣ ಬೆಳಗಿಸಿದಳೆ?

ಅಲ್ಲಿ ಆಕಾಶ
ಇಲ್ಲಿ ಬೆಳಕಿನ ಮಣಿಗಳು
ನಡುವೆ
ಕಾಣದ, ಕೇಳದ ಜೀವತಂತು
ನಿಲ್ಲದೆ ಹರಿದಾಡಿದೆ
ಹೊತ್ತು
ಮೂಡಿದೆ
ಕಂತಿದೆ
ಗೊಣಗಿದೆ
ಸೆಣಸಿದೆ

ಹರಿದಾಟದ ಜಾಡು ಹಿಡಿದ
ಹೆಜ್ಜೆಗಳು
ಕುಂಟೊಬಿಲ್ಲೆಯ ಚೌಕದೊಳಗಿಂದ
ದಿಕ್ಕೆಟ್ಟದಾರಿಗಳೊಳಗೆ ನವೆಯುತ್ತ
ರಂಗೋಲೆ ಎಳೆಗಳೊಳಗೆ
ಹೆಜ್ಜೆ ಸವೆಯುವಾಗ
ಮೈಯೊಳಗೆ ಸೋಜಿಗದ ಜುಳುಜುಳು

ಜುಳು ಜುಳುವಿನ
ಸೆಲೆಯೊಳಗೊಂದು
ಮಣ್ಣ ಕುಡಿಕೆ
ಕುಡಿಕೆಯೊಳಗಿನ
ಪಾತಾಳದೊಳಗೊಂದು
ಆಕಾಶವೆಂಬೊ ಬಯಲೊಳಗೆ
ಮಿನುಗುವ ಚುಕ್ಕಿಗಳ ನಡುವೆ
ಚಿಮ್ಮಿ ಸುಳಿದಿದ್ದು
ಕಣ್ಣ ತೂರಿ
ಎದೆಯೊಳಗಿಳಿದು

ಉಸಿರಿಡಿದಂತೆ
ಒಡಲೊಳಗೆ ಬೇರಿಳಿಸಿತು
ಚಡಪಡಿಸುವ
ಉಸಿರ ಹಿಡಿದಷ್ಟೂ
ಮೊಳೆಯುತ್ತಿತ್ತು
ಮೈ 'ಕೊಳೆ'ತು
ಮಣ್ಣಾಗುತ್ತಿತ್ತು
ಮೊಳಕೆ ಟಿಸಿಲೊಡೆದು
ಆಕಾಶದ ಮಿಣುಕಿಗೆ
ಚಿಮ್ಮಲೆಂದು

ಸರಸ್ವತಿ ಮ. ೧೧೯, ಪಶ್ಚಿಮ ಕಾರ್ಡ್‌ರಸ್ತೆ, ೨ನೇ ಹಂತ, ಮಹಾಲಕ್ಷ್ಮೀಪುರ
ಬೆಂಗಳೂರು - ೫೬೦ ೦೮೬.

# ಅಂಬರನಾದ

ಎಸ್. ಜಿ. ಸಿದ್ಧರಾಮಯ್ಯ.

ಎಲ್ಲರಿಗು ಎಲ್ಲವನು
ವಿವರಿಸಲು ಸಾಧ್ಯವಿಲ್ಲ
ಎಂಥ ಸೂಕ್ಷ್ಮದಲಿ ಜೀವದ
ಜಾಡು ಹಿಡಿದೆ ಗೆಳತಿ?

ಕಾಮವೆನ್ನಲೆ
ಪ್ರೇಮವೆನ್ನಲೆ

ಕರುಳಾಳದ ಕಕ್ಕುಲಾತಿಯಲ್ಲಿ
ಹುಟ್ಟಿಬಂದ ಅನಂಗ ಭಾವಕೆ
ಬೇಕೆ ಹೆಸರಿನ ಉಸಿರ ಸೂತಕ?

ಹಂದರವಿದ್ದೂ ಹಬ್ಬದ ಬಳ್ಳಿ
ಬಳ್ಳಿಯಿದ್ದೂ ಹಂದರ ಕಳ್ಳಿ

ನಂಬಿಕೆ ಅಪನಂಬಿಕೆಗಳ
ಆಗುಹೋಗಿನ ತಿರುಗಣೆ
ಉಳಿದದ್ದು ಉಂಟೆಂಬ ಶಬ್ದಸೂತಕ

ಕೇಳಿಪಡೆಯುವ ಭಿಕ್ಷೆಯಲ್ಲ
ಹಂಗು ಹರಿದು ಸಂಗಗೊಳ್ಳುವ ಅನಂಗರಾಗ.

ಹೊದ್ದ ಮುಸುಕ ತೆಗೆಯಲಾರದ
ನೀತಿಶಾಸ್ತ್ರದ ಕೋಟೆ ಕೊತ್ತಲ

ತಡೆದೀತೆ ಹೇಳೆ ಗೆಳತಿ
ಒಳಗಿನೊಳಗಿನ ಆವೇಗಕ್ಕೆ?

ಮೂಡು ಬಾರೆಯ ಮೇಲೆ
ಕೋಡುಗಲ್ಲಿನ ಗುಡ್ಡ
ಅಡ್ಡಗಟ್ಟಿದೆ ಮೋಡ
ಮೋಹರಕೆ ಗರಿಗೆದರಿದೆ ನವಿಲು

ಅಂಬರದ ನಾದಕ್ಕೆ
ತುಂಬುರು ನರ್ತನ
ಒಗಟಲ್ಲ ಧರಣದಾಹ
ಋತುಮಾನ ಅನಾಹತಗಾನ.

---

ಎಸ್. ಜಿ. ಸಿದ್ಧರಾಮಯ್ಯ, 'ಹೊಂಬೆಳಗು', ನಲಂದ ಶಾಲೆ ಪಕ್ಕ, ರಾಘವೇಂದ್ರ ನಗರ
ತುಮಕೂರು - ೫೭೨ ೧೦೩

# ಯಾಜಮಾನ್ಯದಿಂದ ಸಾಮಾನ್ಯಕ್ಕೆ ಮತ್ತು ಸಾಮಾನ್ಯದಿಂದ ಯಾಜಮಾನ್ಯಕ್ಕೆ ಸಾಗಿದ ಕವಿ: ಹರಿಹರ

ಡಾ. ಕೆ. ವೈ. ನಾರಾಯಣಸ್ವಾಮಿ

ಕನ್ನಡ ವಿಮರ್ಶೆಯು ಸಂಸ್ಕೃತಿ ಅಧ್ಯಯನದತ್ತ ಮುಖಮಾಡಿರುವ ಇವತ್ತಿನ ಸಂದರ್ಭದಲ್ಲಿ ಹರಿಹರ ಮಹಾಕವಿಯ ಕೃತಿಗಳನ್ನು 'ಓದುವ' ಮರು ಪ್ರಯತ್ನವು ಸಂಸ್ಕೃತಿ ಅಧ್ಯಯನಕ್ಕೆ ಅಗತ್ಯವಿರುವ ಸೂಕ್ಷ್ಮತೆಗಳನ್ನು ರೂಪಿಸಿಕೊಳ್ಳುವ ಪ್ರತಿಕ್ರಿಯೆಯಾಗಿ ತೋರುತ್ತದೆ. ಆಧುನಿಕ ಸಾಹಿತ್ಯವನ್ನು ಅರಿಯುವಲ್ಲಿ ಬಳಕೆಯಾಗುತ್ತಿರುವ ಸಾಂಸ್ಕೃತಿಕ ಮಾನದಂಡಗಳು ಪ್ರಾಚೀನ ಸಾಹಿತ್ಯ ವಿಶ್ಲೇಷಣೆಯಲ್ಲಿ ಬಳಕೆಯಾಗಬೇಕಾದ ಅನಿವಾರ್ಯತೆಯನ್ನು ರಗಳೆಗಳ ಓದು ಮಂಡಿಸುತ್ತದೆ.

ಈವರೆಗೂ ನಡೆದಿರುವ ಪ್ರಾಚೀನ ಕೃತಿಗಳನ್ನು ಕುರಿತ ಅಧ್ಯಯನದಲ್ಲಿ 'ಸಂಸ್ಕೃತಿ ನೆಲೆಗಳ ಶೋಧ, ವಿಭಿನ್ನ ಸಂಸ್ಕೃತಿ ಜೀವನ ಕ್ರಮಗಳ ನಡುವಿನ ಸಂಘರ್ಷ, ಕೊಡು ಕೊಳೆ, ಸಂಕರದಂತ ನೆಲೆಗಳು' ಪ್ರಧಾನ ಆಸಕ್ತಿಯಾಗಿ ಅಧ್ಯಯನಕ್ಕೆ ಒಳಪಟ್ಟಿರುವುದು ಕಂಡುಬರುವುದಿಲ್ಲ. ಬದಲಾಗಿ ಕಾವ್ಯ ಪರಂಪರೆ, ವಸ್ತು, ಛಂದಸ್ಸು, ಅಲಂಕಾರ, ಭಾಷೆ ಮುಂತಾದ ರಸಾಸ್ವಾದನೆಯ ನೆಲೆಗಳು, ಮತ, ಭಕ್ತಿ ಆಧರಿಸಿದ ಧಾರ್ಮಿಕ ನೆಲೆಗಳು ಹೆಚ್ಚು ಹೆಚ್ಚು ಅಧ್ಯಯನಕ್ಕೆ ಒಳಪಟ್ಟಿರುವುದು ಕಂಡುಬರುತ್ತದೆ.

ಸಂಸ್ಕೃತಿಯನ್ನು ನಿರ್ದೇಶಿಸಲು ಮಾರ್ಗ ಮತ್ತು ದೇಸಿ ಎಂಬ ಎರಡು ಪಾರಿಭಾಷಿಕ ಪದಗಳನ್ನು ಕನ್ನಡ ವಿಮರ್ಶೆ ಆದಿಯಿಂದಲೂ ಬಳಸುತ್ತಿದೆ. ಇವು ಎರಡು ವಿಭಿನ್ನ ಬಗೆಯ ಜೀವನ ಕ್ರಮಗಳನ್ನು, ಕಾವ್ಯ ಪರಂಪರೆಗಳನ್ನು ಗುರುತಿಸಲು ಬಳಕೆಯಾಗಿವೆ. ಕಾವ್ಯಪರಂಪರೆ ಮತ್ತು ಜೀವನ ವಿನ್ಯಾಸಗಳಲ್ಲಿ 'ಪ್ರಧಾನ-ಯಾಜಮಾನ್ಯ'ದ ನೆಲೆಗಳನ್ನು 'ಮಾರ್ಗ'ವೆಂತಲೂ ಸ್ಥಳೀಯವೂ, ಅಧೀನವೂ, ಪ್ರತಿಭಟನೆಯ ನೆಲೆಗಳನ್ನು 'ದೇಸಿ' ಎಂತಲು ಗುರುತಿಸುವ ರೂಢಿ ಬೆಳೆದುಬಂದಿದೆ.

ಹೀಗೆ ಮಾರ್ಗ ಮತ್ತು ದೇಸಿ ಕಲ್ಪನೆಗಳನ್ನು ಸಂಸ್ಕೃತಿಯ ಪರಿಕಲ್ಪನೆಗಳಾಗಿ ಗ್ರಹಿಸುವ

ಪ್ರಯತ್ನವಿದ್ದರೂ, ಅಧ್ಯಯನ ವಿಶ್ಲೇಷಣೆಗಳಲ್ಲಿ ಮಾತ್ರ ವಸ್ತು, ಭಾಷೆ, ಶೈಲಿ, ಛಂದಸು, ತಂತ್ರ, ಪ್ರಯೋಗಗಳಿಗೆ ಸೀಮಿತಗೊಳಿಸಿರುವುದು ಕಂಡುಬರುತ್ತದೆ. ಹರಿಹರನ ರಗಳೆಗಳನ್ನು ಒಳಗೊಂಡಂತೆ ಒಟ್ಟಾರೆ ಪ್ರಾಚೀನ ಕನ್ನಡ ಸಾಹಿತ್ಯವನ್ನು ಮುಖಾಮುಖಿಯಾಗುವ ಸಂದರ್ಭದಲ್ಲಿ ಅತ್ಯಂತ ಹಳೆಯದಾಗಿರುವಂತೆ ತೋರುವ ಮಾರ್ಗ, ದೇಸಿಯ ಸಮಸ್ಯೆಯನ್ನು ಮರುಪರಿಶೀಲಿಸುವುದು ಅನಿವಾರ್ಯವಾಗಿದೆ. ಮೊದಲಿಗೆ ದೇಸಿ ಮತ್ತು ಮಾರ್ಗದ ಪರಿಕಲ್ಪನೆಗಳನ್ನು ಎರಡು ಭಿನ್ನ ಸಂಸ್ಕೃತಿಯ ಪೂರ್ಣ ರೂಪಕಗಳಾಗಿ ಸ್ವೀಕರಿಸಬೇಕು. ಆಗ ಪ್ರಾಚೀನ ಕೃತಿಗಳ ಒಡಲೊಳಗೆ ಅಂತಸ್ಥಗೊಂಡಿರುವ ಸಂಘರ್ಷಗಳನ್ನು-ಸಮನ್ವಯದ ನೆಲೆಗಳನ್ನು ವಸ್ತುನಿಷ್ಠವಾಗಿ ಅರ್ಥೈಸುವುದು ಸಾಧ್ಯವಾಗುತ್ತದೆ. ದೇಸಿ ಮತ್ತು ಮಾರ್ಗದ ಅನುಸಂಧಾನದ ಪ್ರಶ್ನೆಯನ್ನು ಪ್ರಧಾನ ಕವಿಗಳು ಎದುರಾಗಿರುವ ಕ್ರಮ, ವಿನ್ಯಾಸಗಳು ಅವರ ಕೃತಿಗಳಲ್ಲೆ ಅಂತರ್ಗತವಾಗಿವೆ. ಹರಿಹರನ ರಗಳೆಗಳಲ್ಲಿ ಒಡೆದು ಕಾಣುವ ಪರಸ್ಪರ ವೈರುಧ್ಯದ ಹಾಜರಿಗಳು ಮೇಲಿನ ಮಾತಿಗೆ ಸಾಕ್ಷಿಯಾಗಿವೆ. ಕೆಲವು ವೇಳೆ ಈ ವೈರುಧ್ಯದ ನೆಲೆಗಳು ಓದುಗನನ್ನು ಗೊಂದಲಗೊಳಿಸುವುದೂ ಉಂಟು. ಹರಿಹರನು 'ರಗಳೆ' ಎಂಬ ಅಲಕ್ಷಿತ ಛಂದಸ್ಸನ್ನು ಆಯ್ದುಕೊಂಡು ಸಮಾಜದ ಕಟ್ಟಕಡೆಯ ಮನುಷ್ಯನನ್ನು ಕಾವ್ಯದ ನಾಯಕರಾಗಿಸಿದ್ದು, ಜನಭಾಷೆಯ ನುಡಿಗಳನ್ನು ತನ್ನ ಸರೀಕರಿಗಿಂತ ಹೆಚ್ಚು ವ್ಯಾಪಕವಾಗಿ ಬಳಸಿದ್ದು, ಅಂದಿನ ಯಾಜಮಾನ್ಯದಿಂದ ಪ್ರಜ್ಞಾಪೂರ್ವಕವಾಗಿ ದೂರ ಉಳಿದುದರ ಕುರುಹಾಗಿವೆ. ಈ ಘಟನೆಯನ್ನು ಬಹು ದೊಡ್ಡ ಸಾಂಸ್ಕೃತಿಕ ಪಲ್ಲಟವೆಂದು ವಿಮರ್ಶಾ ಪರಂಪರೆ ಗುರುತಿಸಿ ಹರಿಹರನನ್ನು ದೇಸಿ ಕವಿಯೆಂದು ವೈಭವೀಕರಿಸಿದೆ. ರೂಢಿಬದ್ಧವಾದ ಕಾವ್ಯಮಾರ್ಗವನ್ನು ಬದಲಿಸಿದ ಹರಿಹರ ದೇಸಿ ಪರಂಪರೆಯ ಪರಿಕರಗಳನ್ನು ಬಳಸಿಕೊಂಡು ಕಾವ್ಯ ರಚಿಸಿದನಾದರು ಆತನ ಪ್ರತಿಭೆ ಮತ್ತು ತಾತ್ವಿಕತೆಯನ್ನು ನಿಯಂತ್ರಿಸುತ್ತಿರುವ ಮೂಲದ್ರವ್ಯ ಯಾವುದು ಮತ್ತು ಅದು ಯಾವ ಸಂಸ್ಕೃತಿಯ ವಿನ್ಯಾಸವನ್ನು ಮುಂದಿಡುತ್ತದೆ ಎನ್ನುವ ಪ್ರಶ್ನೆ ಮಹತ್ವದ್ದಾಗಿದೆ. ಮಾರ್ಗಪರಂಪರೆಯು ಪ್ರತಿನಿಧಿಸುವ ಭಾಷೆ, ಪೌರೋಹಿತ್ಯ ಯಾಜಮಾನ್ಯ, ಜಾತಿವರ್ಣಾಶ್ರಮ, ಪ್ರಭುತ್ವ, ಮತೀಯ ಜಡ ಆಚರಣೆಗಳನ್ನು ಹರಿಹರ ತೀವ್ರವಾಗಿ ನಿರಾಕರಿಸುತ್ತಾನೆ. ಆದರೆ ಹರಿಹರನೆ ರೂಪಿಸುತ್ತಿರುವ ಕಥನಗಳೊಳಗೆ ಅಂತಸ್ಥವಾಗಿ ಪ್ರಕಟವಾಗುತ್ತಿರುವ ಮಾರ್ಗ ಸಂಸ್ಕೃತಿಯ ವಿನ್ಯಾಸಗಳಾದ ಗಂಡಿನ ಯಾಜಮಾನ್ಯ, ಬೀಜ ಶ್ರೇಷ್ಠತೆ, ವಾರಸುದಾರತ್ವ, ಭಕ್ತಿರೂಪಿನ ಹಿಂಸೆ ಮುಂತಾದವು ಈ ದೇಸಿ ಕವಿಯ ಸೃಜನ ಜಗತ್ತನ್ನು ಪ್ರವೇಶಿಸಿರುವುದು, ಪೋಷಿಸಲ್ಪಟ್ಟಿರುವುದು ಸಂಸ್ಕೃತಿಯ ಅಧ್ಯಯನದ ಬಹು ದೊಡ್ಡ ಸಮಸ್ಯೆಯಾಗಿದೆ.

ಈ ಸಮಸ್ಯೆಯನ್ನು ಕೆಲ ಉದಾಹರಣೆಗಳೊಂದಿಗೆ ಚರ್ಚಿಸುವುದೊಳಿತು.

## ೧. ಭೂ ಕೇಂದ್ರ

ಹರಿಹರನ ರಗಳೆಗಳಲ್ಲಿ 'ಇಹ'ದ ಲೀಲೆಯ ಮೂಲಕವೇ ಭಕ್ತನ ಬದುಕು ಅನಾವರಣಗೊಳ್ಳುವ ಆಶಯ ಮುಖ್ಯವಾಗಿರುವಂತೆ ತೋರುತ್ತದೆ. ರಗಳೆಗಳಲ್ಲಿ ಪರೀಕ್ಷೆಗೆ ಒಳಗಾಗುವ 'ಇಹ' ಪ್ರಯೋಗ ಶಾಲೆಯಾಗಿರುವುದು ಕಂಡುಬರುತ್ತದೆ. ದೇಸಿ ಅಥವಾ ಜಾನಪದ ಲೋಕ ದೃಷ್ಟಿಯಲ್ಲಿ ಮುಕ್ತಿ, ದರ್ಶನ, ಪರಮಾರ್ಥ ಮುಂತಾದ ಎಲ್ಲವೂ ಭೂಮಿ ಕೇಂದ್ರಕ್ಕೆ ಬದ್ಧವಾಗಿರುತ್ತವೆ. ಹರಿಹರನು

ಕಥಿಸುವ ಅನೇಕ ಭಕ್ತರು ಕೈವಲ್ಯ ಪಡೆಯುವ ಕೈಲಾಸವು ಕೂಡ ಭೂಕೇಂದ್ರದಿಂದ ಹೊರಗಿನದಲ್ಲ. ಉದಾಹರಣೆಗೆ ಕರಿಕಾಲಮ್ಮ ಕೈಲಾಸಕ್ಕೆ ನಡೆದುಕೊಂಡು ಹೋಗುವ ಕಲ್ಪನೆಯನ್ನೆ ಗಮನಿಸಬಹುದು. ಸ್ವತಹ ಹರಿಹರನು ರಗಳೆಗಳ ಪ್ರಾರಂಭ ಮತ್ತು ಅಂತ್ಯದಲ್ಲಿ ಹಂಪೆಯ ವಿರೂಪಾಕ್ಷ, ಹಂಪೆರಾಯ, ಪಂಪಾಪುರಪತಿ, ಪಂಪಾನಾಥಂ, ಹಂಪೆಯರಸು ಮುಂತಾಗಿ ಸ್ತುತಿಸುವಲ್ಲಿಯೂ ಶಿವ 'ಇಹ'ದೊಳಗೆ ದಕ್ಕುವ ಪರಮಾರ್ಥವಾಗಿರುವುದನ್ನು ಗುರುತಿಸಬಹುದು. ಇಂತಹ ನೆಲೆಗಳಲ್ಲಿ ಹರಿಹರ ಕವಿಯು ದೇಸಿ ವಿನ್ಯಾಸಗಳನ್ನು ರೂಪಿಸುತ್ತಿರುವುದನ್ನು ಗಮನಿಸಬಹುದು. ಮತ್ತು ಈಗಾಗಲೆ ಸಿದ್ಧಗೊಂಡಿರುವ ಒಪ್ಪಿತ ದೇವ ಭಕ್ತನ ಸಂಬಂಧ, ನವೀನ ಪೂಜಾಕ್ರಮಗಳು ಮುಂತಾದವುಗಳನ್ನು ಮರುಚರ್ಚಿಸುವುದು ಅನಗತ್ಯ.

## ೨. ವರ್ಣಾಶ್ರಮ ಧರ್ಮದ ತಿರಸ್ಕಾರ ಮತ್ತು ಹುಟ್ಟಿನ ಶ್ರೇಷ್ಠತೆ.

ವೈದಿಕ ಸಂಸ್ಕೃತಿಯು ಹುಟ್ಟಿನ ಕಾರ್ಯ-ಕಾರಣವನ್ನು "ಪರಮೌಲ್ಯ" ವಾಗಿಸುವುದರ ಮೂಲಕ ಜಾತಿಗಳನ್ನು ಬಲಪಡಿಸುತ್ತ ಬಂದಿರುವುದು ಚಾರಿತ್ರಿಕ ಸತ್ಯ. ವ್ಯಕ್ತಿಯ ಹುಟ್ಟು ಆ ವ್ಯಕ್ತಿಯ ಹಿಂದಿನ ಜನ್ಮದ ಪಾಪ-ಪುಣ್ಯಗಳ ಲೆಕ್ಕಾಚಾರಗಳಲ್ಲಿ ಘಟಿಸುವುದೆಂದು ಮಾರ್ಗ-ದರ್ಶನಗಳು ನಿರೂಪಿಸಿವೆ. ಹರಿಹರನ ಕಥಾನಾಯಕರೇನೊ ಹೆಚ್ಚಿನವರು ಸಮಾಜದ ಕೆಳಜಾತಿಗಳಲ್ಲಿ ಹುಟ್ಟಿದವರೇ ಆಗಿರುವುದರಿಂದ ಹರಿಹರ ಹುಟ್ಟುವ "ಪರಮೌಲ್ಯ"ವನ್ನು ಛಿದ್ರಿಸಿದಂತೆ ತೋರುತ್ತದೆ. ಆದರೆ ಕೈಲಾಸದಲ್ಲಿ ಅಚಾನಕ್ಕಾಗಿ ಆದ ಸಣ್ಣತಪ್ಪಿನಿಂದ ಶಾಪಗ್ರಸ್ಥರಾಗಿ ಭೂಮಿಗೆ ಬರುವ ಕೆಳ ಜಾತಿಗಳಲ್ಲಿ ಹುಟ್ಟುವ ಕಥಾನಾಯಕರು ಹೆಸರಿಲ್ಲದೆ ಆ ಜಾತಿಯ ಗುಣ-ಧರ್ಮಗಳಾವುದನ್ನು ಮೈಗೂಡಿಸಿಕೊಳ್ಳದೆ 'ಭಕ್ತ'ರಾಗಿ ಬೆಳೆಯುವುದು ಅಚ್ಚರಿ ಮೂಡಿಸುತ್ತದೆ. ಜೀವನದ ಯಾವುದೇ ಘಟನೆಗೆ ಕಾರ್ಯ-ಕಾರಣಗಳನ್ನು ನಿರ್ದೇಶಿಸದೆ ಹಾಗೆ 'ಹೊರಗೆ' ಉಳಿದು ಬಿಡುವ 'ತೊಟ್ಟ ವೇಷದ' ಹಾಗೆ ಕಾಣುವ ಹರಿಹರನ ಜಾತಿ ಕಲ್ಪನೆಯು ಅತ್ಯಂತ ಮೇಲುಸ್ಥರದ್ದು ಎನಿಸಿಬಿಡುತ್ತದೆ.

## ೩. ಗಂಡಿನ ಯಾಜಮಾನ್ಯ

ರಗಳೆಗಳಲ್ಲಿ ಹರಿಹರ ರೂಪಿಸುತ್ತಿರುವ ಸ್ತ್ರೀಯರು ಪರಾಧೀನೆಯರಾಗಿದ್ದಾರೆ. ಆಲೋಚನಾ ಕ್ರಿಯೆಗಳಲ್ಲಿ ಗಂಡಿನ ನಿಯಂತ್ರಣಕ್ಕೆ ಒಳಪಟ್ಟವರಾಗಿದ್ದಾರೆ. ತಿರುನೀಲಕಂಠನ ಹೆಂಡತಿ, ಅಕ್ಕ, ಕರಿಕಾಲಮ್ಮ ನಿಂಬಿಯಕ್ಕ ಮುಂತಾದ ಮಾದರಿಗಳು ಸ್ವತಂತ್ರ ವರ್ತನೆಗಳನ್ನು, ವ್ಯಕ್ತಿತ್ವವನ್ನು ಕಾಯ್ದುಕೊಂಡವರಂತೆ ಕಂಡರೂ ಪರೋಕ್ಷವಾಗಿ ಗಂಡಿನ ಯಾಜಮಾನ್ಯವನ್ನು ಒಪ್ಪಿಕೊಂಡವರೇ ಆಗಿದ್ದಾರೆ. ಶರಣೆಯರು ಕಥನದ ಕೇಂದ್ರ ವಸ್ತುವಾಗಿರದ ರಗಳೆಗಳಲ್ಲಿ ಕಾಣಿಸಿಕೊಳ್ಳುವ ಹೆಣ್ಣುಗಳು ಮೂಕ ಪ್ರೇಕ್ಷಕಿಯರಾಗಿ, ಗಂಡನ ಭಕ್ತಿ ಸಾಧನೆಯ ಮೆಟ್ಟಿಲುಗಳಾಗಿದ್ದಾರೆ. ಗಂಡಿನ ಇಚ್ಛೆಯನ್ನು ಪೂರೈಸುವ ಪರಿಕರಗಳಂತೆ ಚಿತ್ರಿಸಲ್ಪಟ್ಟಿರುವುದು ಮಾರ್ಗ ಪರಂಪರೆಯು ದೇಸಿ ಪರಂಪರೆಗಳ ಮೇಲೆ ಹೇರಿದ್ದ ಹೆಣ್ಣು - ಗಂಡಿನ ಮಾದರಿಯನ್ನು ಪೋಷಿಸುವಂತೆ ಕಂಡುಬರುತ್ತದೆ. ಹರಿಹರನು ವಚನ ಪರಂಪರೆಯ ಆದರ್ಶವಾದ ಹೆಣ್ಣುಗಂಡಿನ ಸಮಾನತೆಯ ಆಶಯದಿಂದ ದೂರ ಸರಿದಿರುವುದಕ್ಕೆ ಸಾಕಷ್ಟು ಉದಾಹರಣೆಗಳು ಸಿಗುತ್ತವೆ. ಹರಿಹರನು ಪಾರ್ವತಿಯನ್ನು ಶಿವನ ಆಜ್ಞಾನುವರ್ತಿಯಾಗಿ ಅಂಜುವ, ಹೆದರುವ, ಸ್ವತಂತ್ರ ಕತೃತ್ವ ಶಕ್ತಿ ಇಲ್ಲದಂತೆ ಚಿತ್ರಿಸುವ ನೆಲೆಯು ಗಂಡಿನ ಪಾರಮ್ಯವನ್ನು ಒಪ್ಪಿಕೊಂಡಿರುವುದರ ಸಂಕೇತವಾಗಿದೆ. ಮತ್ತು ಮುಖ್ಯವಾಗಿ ರಗಳೆಗಳಲ್ಲಿನ ಸ್ತ್ರೀಯರೆಲ್ಲ ಅಚ್ಚರಿಯ

ರೀತಿಯಲ್ಲಿ ದೇಸಿ ಪರಂಪರೆಯಲ್ಲಿ ಸ್ತ್ರೀಯರನ್ನು ಗಾಢವಾಗಿ ಕಾಡುವ ತಾಯ್ತನದ ಹಂಬಲದಿಂದ ಪಾರಾಗಿರುವುದು ಕೇವಲ ಆಕಸ್ಮಿಕವಲ್ಲ ಎನಿಸುತ್ತದೆ.

### ೪. ವಾರಸುದಾರತ್ವ

ರಗಳೆಗಳಲ್ಲಿ ಮಕ್ಕಳಿಲ್ಲದೆ ಹಂಬಲಿಸುವ ದಂಪತಿಗಳು (ಸಿರಿಯಾಳ, ಅಚ್ಯುತಭಟ್ಟ ಚಂಡೇಶಪಿಳ್ಳೆ ತಂದೆ, ನಂಬಿಯ ತಂದೆ ಮುಂತಾದವರು) ಮಕ್ಕಳಿಗಾಗಿ ದೇವರನ್ನು ಅರ್ಚಿಸುವಾಗ ಗಂಡು ಮಕ್ಕಳನ್ನೆ ವರಬೇಡುವುದು ಹರಿಹರನು ಪ್ರಜ್ಞಾಪೂರ್ವಕವಾಗಿ ನಿರಾಕರಿಸುತ್ತಿರುವ 'ಮಾರ್ಗದ' ಮುಂದುವರಿಕೆಯಾಗಿಯೆ ಕಾಣುತ್ತದೆ. ಪ್ರಧಾನ ಸಂಸ್ಕೃತಿಯಲ್ಲಿ ಆಸ್ತಿ, ವಂಶ ಮುಂದುವರಿಕೆ, ಧಾರ್ಮಿಕ-ವಿಧಿ-ಸಂಸ್ಕಾರಗಳು ಗಂಡುಮಕ್ಕಳಿಂದಲೇ ಪೂರ್ಣಗೊಳ್ಳಬೇಕಿರುವ ಆಶಯಗಳು ಹರಿಹರನ ನಿರಾಕರಣೆಯಲ್ಲಿ ಬೀಜ ರೂಪಿಯಾಗಿರುವುದು ಹರಿಹರ ಎದುರಿಸುತ್ತಿದ್ದ ಸಾಂಸ್ಕೃತಿಕ ಸಂಘರ್ಷಕ್ಕೆ ಸಾಕ್ಷಿಯಾಗಿದೆ.

### ೫. ಹಿಂಸೆಯ ಸಾಂಸ್ಥೀಕರಣ

ಹರಿಹರನ ಬಹುತೇಕ ರಗಳೆಗಳಲ್ಲಿ ಭಕ್ತಿಯ ಉಗ್ರತೆಯನ್ನು ಮತ್ತು ಹಿಂಸೆಯನ್ನು ವೈಯಕ್ತಿಕ ಮತ್ತು ಸಾಮಾಜಿಕ ನೆಲೆ ಎರಡರಲ್ಲೂ ಸಾಂಸ್ಥೀಕರಣಗೊಳಿಸುತ್ತಿರುವ ಪ್ರಕ್ರಿಯೆ ಕಂಡುಬರುತ್ತದೆ. ಏಕದೇವೋಪಾಸನೆ, ಅನ್ಯಮತಗಳ ಮೇಲೆಸಗುವ ಕ್ರೌರ್ಯ (ಏಕಾಂತರಾಮನ ರಗಳೆ), ಪುರಾಣಗಳ ಮರು ಸೃಷ್ಟಿ ಮುಂತಾದವು ಸಾಂಸ್ಕೃತಿಕ ರಾಜಕಾರಣದ ಆಯುಧಗಳಾಗಿ ಭಾರತೀಯ ಸಮಾಜದ ಮೇಲೆ ಉಂಟುಮಾಡಿದ ಸಂಘರ್ಷ-ಸಂಕರಗಳನ್ನು ಹರಿಹರನ ರಗಳೆಗಳು ಕಟ್ಟಿಕೊಡುತ್ತವೆ. ತಾನು ನಂಬಿದ ತತ್ವಗಳನ್ನು ಇತರರನ್ನು ನಂಬಿಸಲು ಪ್ರಯತ್ನಿಸುವ, ನಂಬದವರನ್ನು ಸಂಹರಿಸುವ ಹಿಂಸೆಯ ಒತ್ತಾಯಗಳನ್ನು ಭಕ್ತಿಯ ಹೆಸರಿನಲ್ಲಿ ಸಾಂಸ್ಥೀಕರಣಗೊಳಿಸುವ ಪ್ರಯತ್ನವು ಕಂಡುಬರುತ್ತದೆ. ಇದು ದೇಸೀಯ ಜೀವನಕ್ರಮಗಳು ಮಂಡಿಸುವ "ಸಂಬಂಧದೊಡ್ಡದು" ಎನ್ನುವ ತತ್ವಕ್ಕೆ ವಿರುದ್ಧವಾದುದಾಗಿದೆ.

### ಮುಕ್ತಾಯ

ಹರಿಹರನ ರಗಳೆಗಳನ್ನು ಹೀಗೆ ಸಾಂಸ್ಕೃತಿಕ ರಾಜಕಾರಣವನ್ನು ಹಿಡಿದಿಡುವ ಪಠ್ಯಗಳಾಗಿ ಓದುವುದರಿಂದ ಆತನ ಕಾವ್ಯದ ಶ್ರೇಷ್ಠತೆಗೆ ಏನೂ ಕುಂದುಂಟಾಗದು. ಮಿಗಿಲಾಗಿ ಹರಿಹರನು ಉದ್ದೇಶಪೂರ್ವಕವಾಗಿಯೆ ಮಾರ್ಗದ ಕಾವ್ಯಮಾದರಿಗಳನ್ನು ಬಿಟ್ಟುಕೊಟ್ಟು ವಸ್ತು, ಭಾಷೆ, ಛಂದಸ್ಸು, ಶೈಲಿಗಳನ್ನು ದೇಸಿ ಪರಂಪರೆಯಿಂದ ಸ್ವೀಕರಿಸಿದ ಪ್ರಯತ್ನವು ಅಂದಿನ ಸಂದರ್ಭದಲ್ಲಿ ಬಹುದೊಡ್ಡ ಚಾರಿತ್ರಿಕ ಘಟನೆಯೆ ಆಗಿದೆ. ಹರಿಹರನ ಕಾವ್ಯವು ದೇಸಿ ಪರಿಕರಗಳನ್ನು ಬಳಸಿಕೊಂಡಿದ್ದರೂ ದೇಸಿ ಆಶಯಗಳನ್ನು ಮಾತ್ರ ಪೋಷಿಸಲಿಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಹರಿಹರ ಸಾಂಸ್ಕೃತಿಕ ಆಕೃತಿಗಳನ್ನು ದೇಸಿ ಪರಂಪರೆಯಿಂದ ಪಡೆದವನಾದರೂ ಅವುಗಳ ಒಳ ರಚನೆಗಳು ಪೋಷಿಸುವ ಅಂತಸ್ಸತ್ವವು ಮಾರ್ಗಮುಖಿಯೇ ಆಗಿದೆ. ಆಚರಣೆಗಳ ನೆಲೆಯಲ್ಲಿ ರಗಳೆಗಳಲ್ಲಿ ತಿರಸ್ಕೃತಗೊಳ್ಳುವ ಮಾರ್ಗದ ಆಶಯಗಳನ್ನು ಕಾಣಬಹುದು. ಹಾಗೆಯ ಮೌಲ್ಯವನ್ನು ರೂಪಿಸುವ ಮನೋಧರ್ಮವು

ಮಾರ್ಗವಾಗಿರುವುದನ್ನು ಗಮನಿಸಬಹುದು. ಯಾವುದೇ ಶ್ರೇಷ್ಠ ಕಾವ್ಯ ಕವಿಯ ಇಚ್ಛೆಯನ್ನು ಉಲ್ಲಂಘಿಸಿ ಆ ಕಾಲದ ಸಾಂಸ್ಕೃತಿಕ ಸಂಘರ್ಷಗಳ ಸೂಕ್ಷ್ಮತೆಗಳನ್ನು ತನ್ನ ಆಕೃತಿಗಳ ಒಳಗೆ ಅಂತಸ್ಥಗೊಳಿಸಿಕೊಂಡು ರೂಪುಗೊಳ್ಳುವುದು ಎಲ್ಲರೂ ಬಲ್ಲ ಸಂಗತಿ. ಈ ಮಾತಿಗೆ ಪಂಪನಾದಿಯಾಗಿ ಕನ್ನಡದ ಎಲ್ಲ ಶ್ರೇಷ್ಠ ಕವಿಗಳು ಹಾಗು ಅವರ ಕಾವ್ಯಗಳು ನಿದರ್ಶನವಾಗಬಲ್ಲವು.

ಹರಿಹರನ ರಗಳೆಗಳ ಓದು ಪ್ರಾಚೀನ ಕವಿಗಳು ಅಂದು ಕಾವ್ಯಸೃಷ್ಟಿಯ ಸಂದರ್ಭದಲ್ಲಿ ಎದುರಿಸುತ್ತಿದ್ದ ಹೊರ-ಒಳ ಬಂಡಾಯಗಳು, ಒತ್ತಡಗಳು ಕೃತಿಗಳಲ್ಲಿ ಪಡೆಯುತ್ತಿದ್ದ ಪಲ್ಲಟಗಳನ್ನು ಕಟ್ಟಿಕೊಡುತ್ತವೆ.

●

---

ಡಾ. ಕೆ. ವೈ. ನಾರಾಯಣಸ್ವಾಮಿ, ಕನ್ನಡ ಅಧ್ಯಾಪಕ

# ಹಂಪನಾರ ಚಾರುವಸಂತ : ದೇಸಿ ಕಾವ್ಯದ ಮೊದಲ ಓದು

ಪ್ರೊ. ಸಿ. ನಾಗಣ್ಣ

"ಕಾವ್ಯ ಮತ್ತು ಕಲೆಯೇ ಜಗತ್ತಿನ ಗೊಂದಲಗಳನ್ನು ನೀಗುವ ಗುರಾಣಿ" ಎಂಬ ಮಾತಿನಲ್ಲಿ ಸತ್ಯಾಂಶವಿದೆ. ಜಗತ್ತು ಎಲ್ಲ ಕಾಲದಲ್ಲೂ ಗೊಂದಲಮಯವಾಗಿದ್ದಿರಬೇಕು. ನಾವು ಬದುಕುತ್ತಿರುವ ಕಾಲದಲ್ಲಿ ಲೋಕದಲ್ಲಿ ಜಂಜಾಟಗಳು ಹಿಂದೆಂದಿಗಿಂತ ಅಧಿಕ ಎನಿಸುವುದು ಸಹಜ. 'ಕಾವ್ಯ ಜಂಜಾಟಗಳಿಗೆ ಸಮರ್ಥ ಗುರಾಣಿ' ಎನ್ನುವ ಮಾತಿನ ಹಿನ್ನೆಲೆಯಲ್ಲಿ ಈಗ ತಾನೆ ಬೆಳಕು ಕಂಡಿರುವ ಡಾ. ಹಂಪನಾ ಅವರ ಕಾವ್ಯ **ಚಾರುವಸಂತ** ಈ ಕಾಲದ ವಿಷಾದವನ್ನು ಮರೆಯಿಸಿ ಹಸಾದವನ್ನು ಬಿತ್ತರಿಸುವಂತೆ ವಿನ್ಯಾಸಗೊಂಡಿದೆ.

ಕಾವ್ಯಾರಂಭದ 'ಕಾವ್ಯಸ್ಪಂದನ'ವೆಂಬ ತಮ್ಮ ಪ್ರಸ್ತಾವನೆಯಲ್ಲಿ ಕವಿ ಹೀಗೆ ಹೇಳಿದ್ದಾರೆ: 'ಇದು ರಾಜ ರಾಣಿ ಅರಮನೆ ಕುರಿತ ಕಾವ್ಯವಲ್ಲ. ಯುದ್ಧಮುಖಿ ಕಥನವೂ ಅಲ್ಲ. ಮನುಷ್ಯ ಸ್ವಭಾವದ ವಿನ್ಯಾಸದ ಸಿರಿಗೆಗಳಲ್ಲಿ ಅನಾವರಣಗೊಳ್ಳುತ್ತ ಮತಾತೀತವಾಗಿ, ಮಹೋನ್ನತ ಮಾನವೀಯ ಮೌಲ್ಯಗಳಿಂದ ಕೂಡಿದ ಜನಮುಖಿ ಹಾಗೂ ಸಮಾಜಮುಖಿ ಕಾವ್ಯ. ಈ ಅಮರಪ್ರೇಮದ ಆಖ್ಯಾನವನ್ನು ಆಡುಮಾತಿನ ಲಯದಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದೇನೆ."

ಈಗಾಗಲೇ ಪ್ರಚಲಿತವಿರುವ ಚಾರುದತ್ತ, ವಸಂತಸೇನೆಯ ಕಥೆಯನ್ನು ತಮ್ಮ ಕಾವ್ಯಕ್ಕೆ ಆಧಾರವಾಗಿರಿಸಿಕೊಂಡು ಹೊಚ್ಚ ಹೊಸ ರೀತಿಯಲ್ಲಿ ಹಂಪನಾ ಕಾವ್ಯ ಹೆಣೆದಿದ್ದಾರೆ. ಕಥಾಮುಖ ಕಾಂಡ, ಸುಂದರ ಕಾಂಡ, ಉನ್ಮುಖ ಕಾಂಡ, ಉದ್ಯೋಗ ಕಾಂಡ ಮತ್ತು ದ್ಯಾವಾ-ಪೃಥಿವಿ ಕಾಂಡ ಎಂಬ ಐದು ಕಾಂಡಗಳಲ್ಲಿ ಅಂಗದೇಶದ ಚಂಪಾನಗರದ ವಣಿಕಶ್ರೇಷ್ಠನಾದ ಭಾನುದತ್ತನ ಮಗ ಚಾರುದತ್ತನ ಸುತ್ತ ಹೆಣೆದ ಕಥೆಯಿದು. ಕಥೆಯನ್ನು ಸ್ಥೂಲವಾಗಿ ಹೀಗೆ ರೇಖಿಸಬಹುದು:

ಭಾನುದತ್ತ - ದೇವಿಲೆ ದಂಪತಿಗಳು ನೋಂತು ಪಡೆದ ಸಂತಾನ ಚಾರುದತ್ತ. ಅವನು ಬೆಳೆದು ದೊಡ್ಡವನಾದ ಬಳಿಕ ಮಿತ್ರಾವತಿಯೆಂಬ ಅನುರೂಪಳನ್ನು ತಂದು ಮದುವೆ ಮಾಡುತ್ತಾರೆ. ಸುಖ ಸಮೃದ್ಧಿಯಲ್ಲಿ ಚಾರುದತ್ತನ ಸಂಸಾರ ಸಾಗಿರುವಾಗ ಒಂದು ಪ್ರಮುಖ ಕೊರತೆ ಮನೆಯಲ್ಲಿ

ತಾಂಡವವಾಡುವುದನ್ನು ತಾಯಿ ದೇವಿಲೆ ಗಮನಿಸುತ್ತಾಳೆ. ಚಾರುದತ್ತನು ಮೂರು ಹೊತ್ತೂ ಪುಸ್ತಕವನ್ನು ಓದುತ್ತಾ 'ಪುಸ್ತಕ ಪಿಶಾಚಿ'ಯ ಹಿಡಿತಕ್ಕೆ ಬಲಿಯಾಗಿರುವುದು. ಅವನ ರಸಿಕ ಜೀವನ ಶೂನ್ಯವಾಗಿರುವುದನ್ನು ಗಮನಿಸಿದ ದೇವಿಲೆ ಸಹಜವಾಗಿಯೇ ಗಾಬರಿಯಾಗುತ್ತಾಳೆ ಮತ್ತು ಸಂಸಾರ ವಿಮುಖನಾಗಿ ಗ್ರಂಥದ ಓದಿನಲ್ಲೇ ಮುಳುಗಿರುವ ಮಗನನ್ನು ಇತ್ತ ತಿರುಗಿಸುವ ಇರಾದೆಯಿಂದ ಚಾಣಾಕ್ಷನಾದ ತಮ್ಮ ರುದ್ರದತ್ತನ ಮೊರೆ ಹೋಗುತ್ತಾಳೆ. ಸದ್ಯ ಮಗನು ದಾಂಪತ್ಯ ಸುಖದಾವರಣಕ್ಕೆ ಬರಲೆಂದು ಆಸೆಯಿಂದ ರುದ್ರದತ್ತನಿಗೆ ಬೇಕಾದಷ್ಟು ಧನಕನಕಾದಿಗಳನ್ನು ನೀಡುತ್ತಾಳೆ. ಇದರ ಫಲವಾಗಿ ಉತ್ತೇಜಿತನಾದ ರುದ್ರದತ್ತ ಅಕ್ಕನ ಆಸೆಯಂತೆ ಸೋದರಳಿಯ ಚಾರುದತ್ತನಿಗೆ ಚಂದ್ರವೀದಿಯ ದರುಶನ ಮಾಡಿಸುತ್ತಾನೆ. ಕ್ರಮೇಣ ವಸಂತತಿಲಕೆಯ ಮನೆಯ ಪರಿಚಯವೂ ಆಗುತ್ತದೆ. ಮುಂದೆ ವಸಂತತಿಲಕೆಯ ಸ್ನೇಹದಲ್ಲಿ ಮನೆಮಠ ಮರೆತು ಕಾಲಕಳೆಯುತ್ತಾನೆ. ವಸಂತತಿಲಕೆಯ ತಾಯಿ ಅನಾಮಿಕೆ ಮಗಳ ಸರಸಕ್ಕೆ ಸರಿಯಾಗಿ ಭೂಮಿಕೆ ಸಿದ್ಧಪಡಿಸುತ್ತಾಳೆ.

"ಚುಕ್ಕಿಗಳ ಮಿಣುಕು ಕಿರಣ ಕೂಡ ಕಾಣಲಿಲ್ಲ
ಹಗಲಿರುಳುಗಳ ಎರಿಳಿವು ಸಹ ತಿಳಿಯಲಿಲ್ಲ
ಹಸಿದವನು ಆಹಾರವನು ಕಸಿದುಕೊಳುವಂತೆ
ಬೆರೆತರು ವಿರಹಕಂಜಿ ಜಕ್ಕವಕ್ಕಿಗಳಂತೆ
ಮುಕ್ಕಿದರು ಮೊಗೆಮೊಗೆದು ಸಿಕ್ಕುವುದೆಂತೊ ಹೇಗೊ
ಸಂಸಾರ ಸಾರೋದಯರು ಯಾರೊಳಗೆ ಯಾರೊ!"

ಈ ಪರಿಯಾಗಿ ಎಲ್ಲವನ್ನೂ ಮರೆತು ವಸಂತತಿಲಕೆಯ ಮಡಿಲಲ್ಲಿ ಮುಡಿಯಿಟ್ಟ ಚಾರುದತ್ತನಿಂದ ಎಲ್ಲವನ್ನೂ ಕಸಿದುಕೊಂಡು ಅನಾಮಿಕೆ ಅವನನ್ನು ರಿಕ್ತಸ್ಥಿತಿಯಲ್ಲಿ ಹೊರಗಟ್ಟುತ್ತಾಳೆ. ಆದರೆ ಚಾರುದತ್ತನನ್ನೇ ಸರ್ವಸ್ವವಾಗಿ ಸ್ವೀಕರಿಸಿರುವ ವಸಂತತಿಲಕೆ ಪರಿಪರಿಯಾಗಿ ಹಲುಬುತ್ತಾಳೆ. ಅವನಿಲ್ಲದೆ ಆಕೆ ಬದುಕಲಾರಳು.

"ವಸಂತತಿಲಕೆ ತೊರೆದಳು ಆಹಾರ ಸಹಿತ
...............................................
ವಸಂತ ಮಂದಿರದಲ್ಲೀಗ ಗ್ರೀಷ್ಮ ಋತು
ಮನಮನೆಯೆಲ್ಲ ಬಣಬಣ ಮಸಣದ ಮೌನ
...............................................
ವಸಂತತಿಲಕೆಯ ಹೃದಯ ಕತ್ತಲೆಯ ಕೋಣೆ
'ಎಲ್ಲಿಹನೊ ಎದೆಯಾಣ್ಮ ವಿಲಾಸದ ಕಣೆಯಲ್ಲಿ
ಅನಂಗನಾಯುಧ ಚಾರುದತ್ತ ಕಾಣಿಸಲೊಲ್ಲ
ನಿಚ್ಚ ನಿಚ್ಚಲೆನ್ನಿಚ್ಚೆ ಸಲಿಪನಿಬ್ಬೆಗಾರ
ಹೆಣ್ಣನೆದೆಯೊಡೆಯನು ಚಾರುವಲ್ಲಭ ಚದುರ
ಚೆಲುವರಲಿ ಚೆಲುವನು ಮದನ ಮನೋಹರನೆಲ್ಲಿ."

ವಸಂತತಿಲಕೆಯ ಪರಿತಾಪ ಈ ಬಗೆಯಾದರೆ ಅತ್ತ ಮಗನು ಹಿಡಿದ ದಾರಿಯಿಂದ

ಮೋಹಿತನಾಗಿ ಅವನ ತಂದೆ ಭಾನುದತ್ತನು ಮುನಿದೀಕ್ಷೆ ಪಡೆದು 'ಚಂಪಾನಗರವನು ದಾಟಿ ದೂರದ ಕಾಡಿಗೆ ಹೋಗುವನು. ಸೊಸೆಯ ದುಃಖ ಕಂಡು ಮಮ್ಮಲ ಮರುಗಿ ತಾಯಿ ದೇವಿಲೆ ವಿಹ್ವಲಳಾಗುವಳು. ರುದ್ರದತ್ತನ ವೇಷದಲ್ಲಿ ವಿಧಿ ಬಂದು ತನ್ನ ಪತಿಯು ಹಾದಿ ತಪ್ಪುವಂತೆ ಮಾಡಿತೆಂದು ಚಾರುದತ್ತನ ಪತ್ನಿ ಮಿತ್ರಾವತಿ ಕೊರಗುವಳು. ಮಹಡಿ ಮಹಲುಗಳನ್ನೆಲ್ಲ ಮಾರಿ ಚಾರುದತ್ತನ ಸಾಲಕ್ಕೆ ಸಾಲ ಕಟ್ಟಿ ಅತ್ತೆ ಸೊಸೆ ಪರ್ಣಕುಟಿಯಲ್ಲಿ ವಾಸಮಾಡತೊಡಗುತ್ತಾರೆ.

ಹನ್ನೆರಡು ವರ್ಷಗಳ ನಂತರ ಚಾರುದತ್ತ ಮರಳಿ ತನ್ನ ತಾಯಿ ಮತ್ತು ಮಡದಿಯ ಬಳಿಗೆ ಬರುತ್ತಾನೆ. ಮಡದಿ ತಾಯಿಯರಿಂದ ಧೈರ್ಯಗೊಂಡು ಮತ್ತೆ ಅರ್ಥಾರ್ಜನೆಗೆ ಹೊರಟು ನಿಲ್ಲುತ್ತಾನೆ. ಇತ್ತ ವಸಂತತಿಲಕೆ ತನ್ನ ತಾಯಿಯನ್ನು ಪರಿವರ್ತಿಸುವಲ್ಲಿ ಸಫಲಳಾಗಿದ್ದಾಳೆ. ಚಾರುದತ್ತನಿಂದ ಬಂದಿದ್ದ ಒಡವೆ, ವಸ್ತ್ರ, ಧನಕನಕಾದಿಗಳನ್ನು ಪಡೆದು ದೇವಿಲೆಯ ಬಳಿಗೆ ಬರುತ್ತಾಳೆ. ದೇವಿಲೆ-ಮಿತ್ರಾವತಿಯರು ವಸಂತತಿಲಕೆಯ ಹೃದಯ ಶ್ರೀಮಂತಿಕೆಯನ್ನರಿತು ಅವಳನ್ನು ಸ್ವೀಕರಿಸುತ್ತಾರೆ. ಗರ್ಭಿಣಿಯಾಗಿರುವಳಾದರೂ ವಸಂತತಿಲಕೆ-ಚಾರುದತ್ತರ ಮದುವೆ ನೆರವೇರುತ್ತದೆ. ಮಗಳ ಮದುವೆಯನ್ನು ಕಣ್ತುಂಬ ನೋಡಿ ಅನಾಮಿಕೆ ಸನ್ಯಾಸವನ್ನು ಸ್ವೀಕರಿಸಿ ಹೊರಟುಬಿಡುತ್ತಾಳೆ.

ಮಿತ್ರಾವರ್ತಿ ವಸಂತತಿಲಕೆಯನ್ನು ಸವತಿಯಲ್ಲ ಗೆಳತಿ ಎಂದು ಒಪ್ಪಿದ ಬಳಿಕ ಚಾರುದತ್ತನು ಅರ್ಥೋಪಾರ್ಜನೆಗಾಗಿ ಸಾರ್ಥ ಹೊರಡುತ್ತಾನೆ. ಅನೇಕ ಸ್ಥಳಗಳನ್ನು ಸುತ್ತಿ ಅಗ್ಗವಾಗಿ ಕೊಂಡ ವಸ್ತುಗಳನ್ನು ಇನ್ನೊಂದು ಕಡೆ ಸುಗ್ಗಿಯಲ್ಲಿ ಮಾರಿ ಲಾಭ ಸಂಪಾದಿಸುತ್ತಾ ಚಾರುದತ್ತ ಮುಂದುವರಿಯುತ್ತಾನೆ. ಅವನ ಪರ್ಯಟನೆಯಲ್ಲಿ ಅನೇಕರ ಭೇಟಿಯಾಗುತ್ತದೆ; ಹಾಗೆಯೇ ಪೂರ್ಣಯಕ್ಷ ಎಂಬ ಕಪಟಸನ್ಯಾಸಿಯ ದರ್ಶನವೂ ಆಗುತ್ತದೆ. ಎಲ್ಲ ಲೋಹಗಳನ್ನೂ ಹೊನ್ನಾಗಿ ಪರಿವರ್ತಿಸುವ ರಸವಿದ್ಯೆ ತನ್ನಲ್ಲಿರುವುದಾಗಿ ಅವನು ಚಾರುದತ್ತನನ್ನು ಬೇಸ್ತು ಬೀಳಿಸುತ್ತಾನೆ. ಚಾರುದತ್ತ ಆ ಸನ್ನಿವೇಶದಿಂದ ಹೇಗೋ ಪಾರಾಗಿ ಬರುತ್ತಾನೆ.

ಅತ್ತ ಚಂಪಾನಗರದಲ್ಲಿ ವಸಂತತಿಲಕೆ ಸುಕುಮಾರನೆಂಬ ಗಂಡು ಮಗುವಿಗೂ ಮಿತ್ರಾವರ್ತಿ ಚಾರುಲತೆಯೆಂಬ ಹೆಣ್ಣುಮಗುವಿಗೂ ಜನ್ಮ ನೀಡುತ್ತಾರೆ. ದೇವಿಲೆ ಮೊಮ್ಮಕ್ಕಳ ಸಹವಾಸದಲ್ಲಿ ಸುಖಿದಾಗರದಲ್ಲಿರುತ್ತಾಳೆ. ಹೆಸರುವಾಸಿಯಾದ ರತ್ನದ್ವೀಪದ ಮಾರ್ಗವನ್ನರಸಿ ಹೊರಡುವಾಗ ದುರ್ಗಮವಾದ ಅಜಪಥವನ್ನನುಸರಿಸಬೇಕಾಗುತ್ತದೆ. ಇದಕ್ಕಾಗಿ ಮಜಭೂತಾದ ಏಳು ಹೋತಗಳಿಗೆ ಕಿರುದಾರಿಯಲ್ಲಿ ನಡೆಯುವ ತಾಲೀಮು ಕಲಿಸಿ ಅವುಗಳನ್ನೇ ಬಳಸಿ ಆ ಕಡೆ ತಲುಪುತ್ತಾರೆ. ಚಾರುದತ್ತನು ಪ್ರಯಾಣದ ಜಡರನ್ನು ಪರಿಹರಿಸಿಕೊಳ್ಳಲು ಸ್ನಾನಮಾಡಿ ಹಿಂತಿರುಗುವಷ್ಟರಲ್ಲಿ ರುದ್ರದತ್ತನು ಏಳೂ ಹೋತಗಳನ್ನು ಕೊಂದು ಚರ್ಮ ಸುಲಿದು ತಿದಿಗಳನ್ನಾಗಿ ಪರಿವರ್ತಿಸಿಬಿಡುತ್ತಾನೆ. ಚಾರುದತ್ತನು ಕುಪಿತನಾಗುತ್ತಾನೆ. ರಾತ್ರಿ ಮಲಗುವ ಸಂದರ್ಭದಲ್ಲಿ ತುದಿಯೊಂದರಲ್ಲಿ ಚಾರುದತ್ತನನ್ನು ತೂರಿಸಿ ಹೊಲಿದುಬಿಡುತ್ತಾರೆ; ಉಳಿದವರೂ ಬೇರೆ ಬೇರೆ ತಿದಿಗಳಲ್ಲಡಗಿ ಹೊಲಿದುಕೊಳ್ಳುತ್ತಾರೆ. ಭೇರುಂಡ ಪಕ್ಷಿಗಳು ಈ ತಿದಿಗಳನ್ನೆತ್ತಿಕೊಂಡು ಹಾರುತ್ತವೆ. ಚಾರುದತ್ತನನ್ನು ಎತ್ತಿಕೊಂಡು ಒಂದು ಪಕ್ಷಿ ಪ್ರತ್ಯೇಕವಾದ ಸ್ಥಳದಲ್ಲಿ ಬೀಳಿಸುತ್ತದೆ. ಅಲ್ಲಿರುವ ಯತಿವರೇಣ್ಯನು ತನ್ನ ಬದುಕಿನ ವೃತ್ತಾಂತವನ್ನು ತಿಳಿಸುತ್ತಾ ತನ್ನ ಮಡದಿ ಖೇಚರೇಶ್ವರಿ ವಿದ್ಯುಲ್ಲತೆಯನ್ನು ಅಂಬರಚರರು ಅಪಹರಿಸಿದ ಕಥೆಯನ್ನು ಮನದಟ್ಟು ಮಾಡುತ್ತಾನೆ. ಆ ಮುನಿಪುಂಗವನಿಂದ ಸಿಂಹಗ್ರೀವನ ಪರಿಚಯವಾಗುತ್ತದೆ.

ಶಿವಮಂದಿರಪುರವನ್ನು ನೀನೆ ಆಳಬೇಕೆಂದು ಸಿಂಹಗ್ರೀವನು ಕೇಳಿಕೊಳ್ಳುವಾಗ ಹುಟ್ಟಿದೂರನು, ತಾಯಿ ಮತ್ತು ಮಡದಿಯರನ್ನು ಮರೆತು ಇರಲಾರೆನೆಂದು ಚಾರುದತ್ತನು ವಿನಯದಲ್ಲಿ ಬಿನ್ನವಿಸಿಕೊಳ್ಳುತ್ತಾನೆ. ಚಾರುದತ್ತನು ಅಂಬರಲೋಕವನ್ನು ಬಿಟ್ಟು ಬರುವಾಗ ಅವನೊಡನೆ ಸಿಂಹಗ್ರೀವನ ಮಗಳಾದ ಗಂಧರ್ವದತ್ತೆಯನ್ನು ಭೂಲೋಕಕ್ಕೆ ಕಳುಹಿಸಿಕೊಡುತ್ತಾರೆ. - ಅನುರೂಪನಾದ ವರನನ್ನು ಹುಡುಕಿ ಅವಳಿಗೆ ವಿವಾಹಮಾಡಿರೆಂದು ಒಂದರ್ಥದಲ್ಲಿ ಚಾರುದತ್ತನೇ ಅವಳ ಪಾಲಿಗೆ ತಂದೆಯಾಗುತ್ತಾನೆ; ಅವಳ ವಿವಾಹದ ಜವಾಬ್ದಾರಿ ಅವನದೇ ಆಗುತ್ತದೆ.

ಬುವಿಗಿಳಿದ ಚಾರುದತ್ತನು ತನ್ನ ಸಂಸಾರದಲ್ಲಿ ಸುಖವಾಗಿರಲು ಒಂದು ದಿನ ಅಮರಗಣದ ಅವಳಿ ದೇವತೆಗಳು ಅವನನ್ನು ಪರೀಕ್ಷಿಸಲು ಬರುತ್ತಾರೆ. ಕುಂದದ ಚೆಲುವ ನಾನು ಎಂದೆನುತ ಚಾರುದತ್ತನು ತಿಳಿದಿರುವಾಗ ಮನುಷ್ಯನ ಅಂದಚೆಂದ ಕ್ಷಣ ಕ್ಷಣಕ್ಕೂ ಕುಗ್ಗುವುದೇ ಹೊರತು ಹಿಗ್ಗಲಾರದು ಎಂಬ ನಿಜವನ್ನು ದೇವತೆಗಳು ದೃಷ್ಟಾಂತದ ಮೂಲಕ ತಿಳಿಸಲಾಗಿ ಚಾರುದತ್ತನು ಅರಿತುಕೊಂಡವನಾಗಿ "ಮಡದಿ ಮಕ್ಕಳು ದೇಹದ ಸಿರಿಯ ಅಧ್ರುವತೆಯ" ಕಾಣುತ್ತಾನೆ ಮತ್ತು "ಮನವನು ತಾವರೆಯೆಲೆಯ ಮೇಲಿನ ನೀರಾಗಿಸಿ/ಸ್ಥಿತಪ್ರಜ್ಞ ನಡೆಸಿದನು ದಡಕೆ ಬಾಳನೌಕೆ."

ಕವಿ ಹಂಪನಾ ಕಾವ್ಯವನು ಅಂತ್ಯಗೊಳಿಸುವ ರೀತಿ ಇದು:

"ಹಳೆಯ ಕಥೆಯನೀ ಹೊಸಕಾಲದೆರಕದಲಿ ಹೊಯ್ದು
ಮರುಹುಟ್ಟು ಪಡೆದ ಕಥೆಯನು ಮುದದಿ ಚಿತ್ರಿಸಿದೆ
ರಸತ್ಕಾವ್ಯಗಳ ನೋಡಿ ಸವಿದ ಬಲ್ಲಿದರು
ಬಂಧುರವೀ ಕಾವ್ಯ ಸುಂದರ ಸರಮ್ಯವೆಂದು
ಮೆಚ್ಚಿದರದುವೆ ಸಂಮಾನ ನನಗೆ ಹಿರಿದು ಬಿರುದು."

**ಚಾರುವಸಂತ** ಕಾವ್ಯವನ್ನು ಅಭ್ಯಾಸ ಮಾಡುವಾಗ ಶೀಲ (Virtue) ಮತ್ತು ಔದಾರ್ಯಕ್ಕೆ ಹೆಚ್ಚು ಮನ್ನಣೆ ದೊರೆತಿರುವುದು ಸ್ಪಷ್ಟವಾಗುತ್ತದೆ. ಹಾಗಾಗಿ 'End of all earthly learning is virtuous action' ಎಂಬ ಅಭಿಪ್ರಾಯ ಇಲ್ಲಿ ಅರ್ಥಪೂರ್ಣವಾಗುತ್ತದೆ. ಚಾರುದತ್ತನ ಚಾರಿತ್ರ್ಯವನ್ನು ಗಮನಿಸುವಾಗ ಜನಸಮುದಾಯದಲ್ಲಿ civility ತರುವವನು ಕವಿ ಎನ್ನುವ ನಿಜ ಸಾಬೀತಾಗುತ್ತದೆ. ಚಾರುದತ್ತ ವಣಿಕನಾದರೂ ಪುಸ್ತಕದ ಗೀಳು ಅಂಟಿಸಿಕೊಂಡವನು.

"ಚಾರು ಪರಿದಾಡುವನು ಪುಸ್ತಕ ಮಂದಿರಕೆ
ಬುವಿಯಲಿ ಸಮನುಂಟೆ ಅಕ್ಷರ ಲೋಕಕೆ"

ಈ ಹಿನ್ನೆಲೆಯಲ್ಲೇ ಅವನ ತಾಯಿ ದೇವಿಲೆ ಅವನನ್ನು ಸಂಸಾರಮುಖಿಯನ್ನಾಗಿಸಲು ರುದ್ರದತ್ತನ ಸಹಾಯ ಬೇಡುವುದು. ವೇಶ್ಯೆಯ ಮಗಳಾದರೂ ವಸಂತತಿಲಕೆ ಚಾರುದತ್ತನ ಮೋಹಕ್ಕೆ ಮಾತ್ರ ವಶಳಾದವಳು - ಇಲ್ಲಿಯೂ ಕೂಡ ಸದಾಚಾರಕ್ಕೆ ಒತ್ತು ಬೀಳುವುದು. 'A Poet is a moral philosopher' ಎಂಬ ಮಾತಿಗೆ ಪೂರಕವಾಗಿ ಚಾರುದತ್ತ - ವಸಂತತಿಲಕೆಯರ ಬದುಕಿನ ಮೂಲಕ ಕವಿ ಚಿತ್ರಕಟ್ಟುತ್ತಾರೆ. ವೈದೃಶ್ಯಕ್ಕಾಗಿ ವಸಂತತಿಲಕೆಯ ತಾಯಿ ಅನಾಮಿಕೆಯ ಧನದಾಹ ಕಾಣಿಸಿಕೊಳ್ಳುತ್ತದೆ. ಮಿತ್ರಾವತಿ ಪತಿಯ ಅತಿನಡವಳಿಕೆಯನ್ನು ಅರಗಿಸಿಕೊಂಡ ಪರಾಯಣೆಯಾಗಿದ್ದಾಳೆ.

'patience' ಮತ್ತು 'magnanimity' ಕಾವ್ಯದ ಗುರುತರ ಚಿಹ್ನೆಗಳೆಂದರೆ ಮಿತ್ರಾವತಿ ಆ ಮೌಲ್ಯದ ಪ್ರತಿನಿಧಿಯಾಗಿದ್ದಾಳೆ. ಕಥೆ ಬೆಳೆದಂತೆ ವಸಂತತಿಲಕೆಯ ಅಚಲ ಪ್ರೇಮದ ಪರಿಯನ್ನರಿತು ಸಹೋದರಿಯಂತೆ ಸ್ವೀಕರಿಸುತ್ತಾಳೆ. ಮಿತ್ರಾವತಿಯ ಸುಗುಣಗಾಂಭೀರ್ಯ ಕಾವ್ಯದಲ್ಲಿ ಎದ್ದುಕಾಣುತ್ತದೆ. ಈ ಕಾವ್ಯದ ಸೋಜಿಗವೆಂದರೆ ಆರಂಭದಿಂದ ಅಂತ್ಯದವರೆಗೆ ಬಿರುಕಿಲ್ಲದ ರೀತಿ ಅದರಲ್ಲಿ ಅದಿರನ್ನು ತುಂಬಿರುವುದು (ಕೀಟ್ಸ್ ಶೆಲ್ಲಿಗೆ ಹೇಳಿದ್ದು : 'God load every rift with ore'.)

ಕಾವ್ಯದ ಕ್ರಿಯೆಯಾದರೂ ಬಹುಕಾಲದಿಂದ 'Teach and delight' ಎಂಬುದೇ ಆಗಿದೆ. ವಣಿಕನಾದರೂ ಅತಿಯಾಸೆಗಿಳಿಯದೆ ತನ್ನ ಉದಾರತನದಿಂದ ಸಮಚಿತ್ತದಲ್ಲಿ ವ್ಯವಹರಿಸುವ ಚಾರುದತ್ತನ ರೀತಿ ಮನನಯೋಗ್ಯವಾಗಿದೆ. ಇದೇ ಲೋಕವೇ ಒಂದು ವ್ಯಾಪಾರಕೇಂದ್ರವಾಗಿರುವ ಈ ಹೊತ್ತಿನಲ್ಲಿ ಈ ಮಾದರಿ ಬಹಳ ಮಹತ್ವಪೂರ್ಣವಾಗಿದೆ. ಕವಿ ಕಾವ್ಯವನ್ನು ನಡೆಸಿರುವ ಒಟ್ಟು ಕ್ರಮ ಓದುಗನಲ್ಲಿ ಹರ್ಷ ಮತ್ತು ಆನಂದವನ್ನುಂಟುಮಾಡುವಂತಿದೆ. ಯಾವ ಭಾಗ ತೆಗೆದು ಓದಿದರೂ ಓದುಗನಿಗೆ ನಿರಾಶೆಯಾಗದು; ಅಂಥ ರಸದ ಮಡುವನ್ನು ಹಂಪನಾ ಈ ಕಾವ್ಯದಲ್ಲಿ ಸೃಷ್ಟಿಸಿದ್ದಾರೆ.

ಹಂಪನಾ ಚಾರುವಸಂತವನ್ನು ದೇಸಿ ಕಾವ್ಯವೆಂದು ಕರೆದಿದ್ದಾರೆ. ಪ್ರಚಲಿತವಿರುವ ಕವಿವಾಕ್ಯಗಳು, ನಾಣ್ಣುಡಿಗಳು, ಸೂಕ್ತಿಗಳು ಹಾಗೂ ಲೋಕಜ್ಞಾನವನ್ನು ಬಿತ್ತರಿಸುವ ನುಡಿಗಡಣವನ್ನು ಕಾವ್ಯದಲ್ಲಿ ಹದವಾಗಿ ಕೋದಿರುವುದರಿಂದ ಇದು ದೇಸೀತನವನ್ನು ಮೆರೆದಿದೆಯೆಂದು ಅರ್ಥಮಾಡಿಕೊಳ್ಳಬಹುದು. ಕಾವ್ಯದ ಮೊದಲನೆ ಸಾಲೇ 'ಧರಣಿ ಮಂಡಲ ಮಧ್ಯದೊಳಗತಿ ದಟ್ಟೈಸಿದ' ಎಂದಿದೆ. 'ಗೋವಿನ ಹಾಡಿನ' ಮಾರ್ದನಿ ಇಲ್ಲಿ ಮೊಳಗಿರುವುದು ಈ ಕಾವ್ಯ ಇದೆ ಬಗೆಯಾಗಿ ನಮ್ಮ ಪರಂಪರೆಯ ಪದಗಳನು ಒಂದು ವಿಧವಾಗಿ ಒಳಗೊಳ್ಳುವ ಮುನ್ಸೂಚನೆಯಾಗಿದೆ. ತೃತೀಯ ಜಗತ್ತಿನ ಸೃಜನಶೀಲತೆಯು ಜೀವಾಳವಡಗಿರುವುದು ಮೌಖಿಕಪರಂಪರೆಯ ಆವಾಹನೆಯಲ್ಲಿ. ಅದಕ್ಕಾಗಿಯೇ ಚಿನುವ ಅಚಿಬೆ ಹೇಳಿದುದು, 'ಗಾದೆಗಳನ್ನು ನುಂಜಿಕೊಂಡೇ ನನ್ನ ನುಡಿ ಮಿಡಿಯುವುದು' ಎಂದು.

ಪದಾರ್ಥ ಪ್ರಪಂಚದ ಮೆರೆದಾಟದಲ್ಲಿ 'ಭಯ' ಮತ್ತು 'ಆಸೆ' ತಾಂಡವವಾಡುವುದು ಸಹಜ. ಇದಕ್ಕೆ ತದ್ವಿರುದ್ಧವಾದ ಚೈತನ್ಯಗಳೆಂದರೆ 'ಔದಾರ್ಯ' ಮತ್ತು 'ನ್ಯಾಯ'. ಈ ಪರಿಕಲ್ಪನೆಗಳನ್ನು ಮುನ್ನೆಲೆಗೆ ಒಡ್ಡುವುದರ ಜೊತೆಗೆ ಆಧುನಿಕ ಕಾಲದ ಇನ್ನೊಂದು ದೊಡ್ಡ ಶಾಪವಾದ ಯುದ್ಧವನ್ನೂ ಕೂಡ ಈ ಕಾವ್ಯ ವಿರೋಧಿಸುತ್ತದೆ. ಹಾಗೆಯೇ ಚಾರುವಸಂತದ ಚಾರುದತ್ತನು ಕವಿಯ ದೃಷ್ಟಿಯಲ್ಲಿ ಸಂಸಾರ ಸಾರೋದಯನಾಗಿದ್ದಾನೆ. ನಿಜ ಸಂಸಾರದ ಕಕ್ಷೆಯ ಹೊರಗೆ ಅವನ ಪ್ರಜ್ಞೆ ಜಾರಿದಾಗಲೂ ಅವನು ಸಂಸಾರ ಸಾರೋದಯವಾಗಲಿ ಎಂಬ ಹರಕೆಯು ಅವನನ್ನು ಪೊರೆಯುತ್ತದೆ. ಹಾಗಾಗಿ ಸವತಿ ಮಾತ್ಸರ್ಯದಲ್ಲಿ ಕುದಿಯಬೇಕಾದ ವಸಂತತಿಲಕೆ-ಮಿತ್ರಾವತಿಯರು ಸಹೋದರಿಯರಾಗಿ ರಥದ ಎರಡು ಗಾಲಿಗಳಾಗುತ್ತಾರೆ. ತಪ್ಪಿಹೋದ ಆಯವನ್ನು ಮರಳಿ ಪಡೆದು ನೇರ್ಪಾಗಿ ಬಾಳುವ ಚಾರುದತ್ತ ಆದರ್ಶಪ್ರಾಯವಾಗುತ್ತಾನೆ.

ಚರಿತ್ರಕಾರನಿಗೂ ಕವಿಗೂ ಒಂದು ದೊಡ್ಡ ವ್ಯತ್ಯಾಸವಿದೆ. ಚರಿತ್ರಕಾರನು ಮೂರ್ತ ಜಗತ್ತಿನ

ಸತ್ಯಕ್ಕೆ ಕಟ್ಟುಬಿದ್ದವನಾಗಿ ತನಗೊದಗಿದ ಕಾಯಕವನ್ನು ಚೆನ್ನಾಗಿ ನಿರ್ವಹಿಸುವ ಭರದಲ್ಲಿ ಲಂಗುಲಗಾಮಿಲ್ಲದ ಕೆಡುಕಿಗೆ ಕುಮ್ಮಕ್ಕು ಕೊಡುತ್ತಾನೆ-ಪ್ರಾಯಶಃ ತನಗರಿವಿಲ್ಲದಂತೆಯೇ. ಕವಿ ಹೆಚ್ಚಿನ ಜವಾಬ್ದಾರಿಯಿಂದ ಕಾರ್ಯ ನಿರ್ವಹಿಸುತ್ತಾನೆ. ಹಾಗಾಗಿ ಕವಿ ಬದುಕಿನ ಅರ್ಥವನ್ನು ಬೆದಕುವುದು: "The end of all earthly learning is virtuous action" ಎಂಬ ಅರಿವಿನ ಆಧಾರದ ಮೇಲೆ. ಈ ಸದಾಚಾರ ಸಂಪತ್ತಿನಲ್ಲಿ ಹೃದಯಕ್ಕೆ ಮೊದಲನೇ ಸ್ಥಾನ. ಐಹಿಕ ಸುಖ ಮತ್ತು ಯಶಸ್ಸಿನ ಅನ್ವೇಷಣೆಯ ನಾಗಾಲೋಟದಲ್ಲಿ ಹೃದಯ ಮೂಲೆಗುಂಪಾದರೆ ಆಶ್ಚರ್ಯವಲ್ಲ. ಅಂತಃಕರಣದ ಹಿರಿಮೆಯನ್ನು ಹಂಪನಾ ಅವರ **ಚಾರುವಸಂತ** ಎತ್ತಿ ಹಾಡಿದೆ. ಇದು ಈಗ ಬೇಕಾಗಿದ್ದ ಕಾವ್ಯವೆಂದು ನಿಸ್ಸಂದೇಹವಾಗಿ ಹೇಳಬಹುದು.

ಈ ಕಾವ್ಯ ಮೂಡಿದ ತುರ್ತನ್ನು ಕುರಿತು ಹಂಪನಾ ತಮ್ಮ ಪ್ರಸ್ತಾವನೆಯಲ್ಲಿ "ಒಂದೇ ತಿಂಗಳಲ್ಲಿ ಈ ಕಾವ್ಯ ರೂಪುಗೊಂಡಿತು." ಎಂದು ತಿಳಿಸಿದ್ದಾರೆ. ಸೃಜನಶೀಲತೆಯ ಪರಿಯನ್ನರಿತವರಿಗೆ ಈ ಮಾತನ್ನು ನಂಬಲು ಕಷ್ಟವಾಗಲಾರದು. ಅನೇಕ ಸಂವತ್ಸರಗಳಿಂದ ಆಕಾರ ಪಡೆಯಲು ಹವಣಿಸುತ್ತಿದ್ದ ಒಂದು ವಸ್ತು ಕಾವ್ಯವಾಗಿ ಸಾಕಾರಗೊಳ್ಳಲು ಒಂದು ನೆಪದ ಅಗತ್ಯ ಇದ್ದಿರಬಹುದು. ಅಂಥ ಅದ್ಭುತಗಳು ಜರುಗುವುದು ಸೃಜನಶೀಲರಾದವರು 'ನಿರ್ವಾತ'ವನ್ನು ಪ್ರವೇಶಿಸುವುದರಿಂದ. 'ನಿರ್ವಾತ' ಮತ್ತು 'ಸೃಷ್ಟಿ' ಎರಡಕ್ಕೂ ಹೊಂದಾಣಿಕೆಯಾಗದೆಂದು ಹೊರನೋಟಕ್ಕೆ ಅನಿಸುವುದು; ಆದರೆ ಈ 'ನಿರ್ವಾತ' ಎಂಬ ಪರಿಕಲ್ಪನೆಯ ವೈಶಿಷ್ಟ್ಯವನ್ನು ನಾವು ಅರ್ಥಮಾಡಿಕೊಳ್ಳಬೇಕು. ಮೊನ್ನೆ ಟೆಸ್ಟ್ ಕ್ರಿಕೆಟ್‌ನಲ್ಲಿ ಅತಿ ಹೆಚ್ಚು ರನ್ನುಗಳನ್ನು ಗಳಿಸಿ ವಿಶ್ವದಾಖಲೆ ನಿರ್ಮಿಸಿದ ಆಸ್ಟ್ರೇಲಿಯದ ಕ್ರಿಕೆಟ್ ಪಟು ಮ್ಯಾಥ್ಯೂ ಹೇಡನ್ ಈ 'vaccum' ನ ಬಗ್ಗೆ ಸ್ಪಷ್ಟಪಡಿಸಿದ್ದಾನೆ. ತನ್ನ ಪರಿಣತಿಯನ್ನು ಕಾವ್ಯಾತ್ಮಕವಾಗಿ ಬಣ್ಣಿಸಿರುವ ಅವನ ಸಹಜ ವಿವರಣೆಯನ್ನು ಗಮನಿಸೋಣ:

"When you are batting really well, you are almost in a vacuum, and in that vacuum you feel that time shreds away, and runs are just a consequence of being in the vacuum."

ಬಹಳ ಅರ್ಥಗರ್ಭಿತವಾದ ಮಾತಿದು. ಮನಮಂದರದ ನಿರ್ವಾತದಲ್ಲಿ ಕುಳಿತು ಹಂಪನಾ ಅವರು ಒಂದೇ ತಿಂಗಳಲ್ಲಿ ಕಾವ್ಯ ಬರೆದಿದ್ದಾರೆ. ಒಂದು ಕಾವ್ಯ ಒಂದು ಜನಾಂಗದ ಮತಿಯ ಶ್ರೀಮಂತಿಕೆಯ ಪ್ರತೀಕ. ಕನ್ನಡದ ಮನಸ್ಸು ಎಂದಿನಂತೆ ಇಂದೂ ಕೂಡ ಹೆಚ್ಚು ಪ್ರಖರವಾಗಿ ಧ್ಯಾನಿಸುತ್ತಿದೆ; ಇದರ ಫಲವಾಗಿ ಬಗೆಬಗೆಯ ಜಸದ ಫಲಗಳನ್ನು ದಕ್ಕಿಸಿಕೊಳ್ಳುತ್ತಿದೆ. ಮಹಾಕಾವ್ಯಗಳು ಒಂದಾದ ಮೇಲೊಂದರಂತೆ ಬರತೊಡಗಿವೆ. ದೀರ್ಘಕಾವ್ಯದ ಅಗ್ನಿಪರೀಕ್ಷೆಯಲ್ಲಿ ತೇರ್ಗಡೆಯಾಗಲು ಎಲ್ಲ ಕವಿಗಳೂ ಹಾತೊರೆಯುತ್ತಾರೆ. ಹಾಗೂ ಕವಿಗಳ ಯಾನ ಸಾಮಾನ್ಯವಾಗಿ 'ಲಿರಿಕ್' ನಿಂದ 'ಎಪಿಕ್'ನ ಕಡೆಗೆ. ತಮ್ಮ ದೀರ್ಘದಾಂಪತ್ಯದ ಸಂಭ್ರಮಾಚರಣೆಯನ್ನೇ ನೆಪವಾಗಿಸಿಕೊಂಡು ಹಂಪನಾ ಮೊದಲೇ ದೀರ್ಘಕಾವ್ಯವನ್ನು ಬರೆದು ಹೊಸದೊಂದು ಮೈಲಿಗಲ್ಲನ್ನು ಸ್ಥಾಪಿಸಿದ್ದಾರೆ. ಇದರಿಂದ ಅವರ ಕಿರೀಟಕ್ಕೆ ಹೇಗೋ ಹಾಗೆ ಕನ್ನಡದ ಕಿರೀಟಕ್ಕೂ ಹೊಸದೊಂದು ಗರಿ ಮೂಡಿದೆ. **ಚಾರುವಸಂತ** ಮೊದಲ ಓದಿನ ಸಂಭ್ರಮದ ಮಾತಿದಾದರೂ ಈ ಕಾವ್ಯ ಎಂಥ ಕಠಿಣ ವಿಮರ್ಶೆಯ ಲೋಹದ ಚೌಕಟ್ಟಿನ ಮೂಲಕ ಬೇಕಾದರೂ ಹಾಯ್ದು ಬಚಾವಾಗಬಲ್ಲುದು. ಪದಗಳು ರಸಿಕಜನರ

ನಾಲಗೆಯ ಮೇಲೆ ನಲಿದಾಡಿದಾಗಲೇ ಅವಕ್ಕೆ ದೀರ್ಘಾಯಸ್ಸು. ನಮ್ಮ ಪಂಪ, ಕುಮಾರವ್ಯಾಸ ಮತ್ತು ಕುವೆಂಪು ಬದುಕಿರುವುದು ಆ ಮಾಯದಿಂದ. ಹಂಪನಾ ಅವರ **ಚಾರುವಸಂತ** ರಸಿಕಜನರ ನಾಲಗೆಗೆ ಬರುವ ಎಲ್ಲ ಲಕ್ಷಣಗಳನ್ನೊಳಗೊಂಡ ಕಾವ್ಯವಾಗಿದೆ.

ಮೊದಲು ಹೇಳಿದ ಮಾತನ್ನೇ ಕೊನೆಯಲ್ಲಿ ನೆನೆಯುವುದರ ಮೂಲಕ ಒಂದು ವರ್ತುಲವನ್ನು ಪೂರಯಿಸುವ ಆಸೆ ನನಗೆ: "ಕಾವ್ಯವೇ ನಮ್ಮ ಎಲ್ಲ ಗೊಂದಲಗಳಿಂದ ನಮ್ಮನ್ನು ಕಾಪಾಡುವ ಗುರಾಣಿ."

●

**ದಿನಾಂಕ ೧೨.೧೦.೨೦೦೩ರಂದು ಬೆಂಗಳೂರಿನ ಆರ್.ವಿ. ಟೀಚರ್ಸ್ ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿದ್ದ 'ಚಾರುವಸಂತ' ಕಾವ್ಯ ಬಿಡುಗಡೆ ಸಮಾರಂಭದಲ್ಲಿ ಮಾಡಿದ ಭಾಷಣವನ್ನು ಆಧರಿಸಿದ ಲೇಖನ.**

---

ಪ್ರೊ। ಸಿ. ನಾಗಣ್ಣ, ಆಂಗ್ಲ ಭಾಷ ವಿಭಾಗ, ಮಹಾರಾಜ ಕಾಲೇಜು, ಮೈಸೂರು.

# ಅನಾಹತ ಗಾನದ ಜಾಡ ಹಿಡಿದು

ಎಸ್. ಜಿ. ಸಿದ್ಧರಾಮಯ್ಯ

ಗಣೆ-ಗೊಲ್ಲ ಜನಾಂಗದ ಸಾಂಸ್ಕೃತಿಕ ವಾದ್ಯವಿಶೇಷ. ಪಶುಪಾಲನಾ ಕಾಯಕಕ್ಕೂ ಗಣೆಗೂ ಅಂಟಿನ ನಂಟು; ಕಿತ್ತು ಕಳೆಯದ ಕುಸುಮ ಗಂಧ. ಜುಂಜಪ್ಪನ ಒಕ್ಕಲ ಮಕ್ಕಳಾದ ಗೊಲ್ಲರಿಗೆ ಸೃಜನಶೀಲತೆ ಎಂಬುದು ಕಡತಂದ ಒಡವೆಯಲ್ಲ; ಒಡಲೊಳಗಿನ ಉಸಿರಾಗಿ ಗಣೆಯ ನಾಭಿಯಲ್ಲಿ ಪ್ರಾಣವಾದದ್ದು. ತಮ್ಮ ಪೂರ್ವಿಕನಾದ ಜುಂಜಪ್ಪನ ಪುರಾಣವೆಂದರೆ ಅದು ಗೊಲ್ಲ ಜನಾಂಗದ ಜೀವನಗಾಥೆ. ಇಂದಿಗೂ ಮಧುಗಿರಿಯ ಹತ್ತಿರದ ಮಾಡಗಾನಹಟ್ಟಿಯ ದಾಸಪ್ಪನು ಹಾಡುವ ಜುಂಜಪ್ಪನ ಪುರಾಣ ಗಾಥೆಯ ಉಸಿರು ಹರಿಯುವುದೇ ಗಣೆಯ ಮೇಲಿನ ಬೆರಳ ಸಂದಿಯ ನಾಭಿ ಮೂಲದಲ್ಲಿ. ಹೀಗಾಗಿ ಗಣೆ ಎಂಬುದು ಗೊಲ್ಲರ ಸೃಜನ ಬದುಕು. ಗಣೆಯ ನಾದವೆಂದರೆ ಗೊಲ್ಲರ ಜೀವನ ಸಂಗೀತ. ಈ ಇಂಥ ನೆಲಮೂಲದ ಸಾಂಸ್ಕೃತಿಕ ಮನಸ್ಸನ್ನು ತಮ್ಮ ಎದೆಗೆ ತುಂಬಿಕೊಂಡು ಆಧುನಿಕ ಬದುಕಿನ ಒಳಹೊರಗನ್ನು ಆತ್ಮಾವಲೋಕನದ ಪರಿಯಲ್ಲಿ ಅನ್ವೇಷಿಸುವ, ಆವಿಷ್ಕರಿಸುವ ಆದನ್ನು ಜೀವನಗಾಥೆಯಾಗಿಸುವ ಕಾವ್ಯಸಾಹಸಕ್ಕಿಳಿದ ಕವಿ ಶಂಕರ ಕಟಗಿ. ಇದು ಅನಾಹತಗಾನ, ಬಯಲಗಾನ.

ಕರಿಕಂಬಳಿ ಗದ್ದುಗೆ ಹಾಕಿ
ಮರಿನೆಣದ ದೀವಿಗೆ ಹಚ್ಚಿ
ಕತೆಯ ಗವಿ.......ಗಣೆ ಎತ್ತಿ
ತುತ್ತಿನ ತಿದಿಬೆಂಕಿ ಉಸಿರ ನೀಡತೊಡಗಿದೆ

ಜಡೆಗಟ್ಟಿದ ನಾದ ಹನಿವೊಡೆದು
ಗಣೆ ಗವಿಯಿಂದ
ಆ ಹುಡುಗನ ಮಿದುನೆತ್ತಿಯೊಳಗೆ ಇಂಗಿ
ಹುತ್ತ ಹೊಂದಾವರೆಯಲಿ ಉದಕಗೊಂಡು

ಸಂಚಾರಗೊಂಡಿತು ಜಂಗಮನ ಹಾಗೆ
ನಾಡಸೀಮೆಯಿಂದ ಆ ಕಾಡ ಸೀಮೆಗೆ

ಎದೆತೆರೆದು ಕತೆಕೇಳಲು
ಕುಳಿತು ಹುಡುಗನಿಗೆ
ಒಮ್ಮೆಲೆ ದಿಕ್ಕುದಿಗಿಲಾಗಿ
ಉಕ್ಕಿದವು ರಾಗ
ನಾದ ನಡೊವೊಳಗೆ.

ಗಣೆಯಸಾದ-ಶಂಕರ ಕಟಗಿಯವರ ಮೂರನೆಯ ಕವನ ಸಂಕಲನ. ಈ ಸಂಕಲನದಲ್ಲಿ ಮೂರನೆಯ ನೋಟವೊಂದಿದೆ; ಅದು ಮುಗ್ಧಕಂದನ ಕಣ್ಣಿನ ಭಾಷೆ. ಇಲ್ಲಿನ ಮುಗ್ಧತೆ ವಿಶಿಷ್ಟ ಬಗೆಯದು. ಮಗುವಿನ ಮನೋಹರ ಪಾರದರ್ಶಕ ಪರಿಶುದ್ಧತೆ ಅದರ ಮೂಲಗುಣ. ಇದು ನಿಸರ್ಗ ಚೆಲುವಿನ ಸಮೃದ್ಧ ಧಾತುವಿನ ಜೀವಕಳೆ. ಈ ಧಾತುವಿನಲ್ಲಿ ಧೀ ಅರ್ಥಾತ್ ಬುದ್ಧಿ ಬೇರುಬಿಟ್ಟ ಬೆಳಸು. ಅಂದರೆ ಇದು ಕೃತಕ ಜ್ಞಾನವಲ್ಲ.

ಅನ್ನಮಯ ಕಾಯಬಿಟ್ಟು
ಆನಂದಮಯ ಕಾಯವ ತೊಟ್ಟು
ಬಯಲ ಆತ್ಮವೂ ಆಗಿರುವ

ನಿಸರ್ಗಾನುಭೂತಿಯ ಸಹಜ ಮನೋಧರ್ಮ. ಇಂಥ ಕಣ್ಣು ಪ್ರಶ್ನೆ ವಿಸ್ಮಯಗಳ ಮುಖೇನ ವ್ಯಕ್ತಮಧ್ಯದ ಬದುಕನ್ನು ಪರೀಕ್ಷೆಗೆ ಒಡ್ಡುತ್ತದೆ. ಈ ಪ್ರಶ್ನೆ ವಿಸ್ಮಯಗಳ ಒಳಪಾತಳಿಗೆ ಸಿಕ್ಕು ಕವಿ ಮನ ಉತ್ತರ ಕಂಡುಕೊಳ್ಳಲು ಅನ್ವೇಷಣಾ ಮುಖಿಯಾಗುತ್ತದೆ. ಈ ಅನ್ವೇಷಣೆಯ ಯಾನದಲ್ಲಿ ಕಾಣಬರುವ ಉತ್ತರಗಳು ನರನ ಬದುಕು ಜ್ಞಾನದ ಹೆಸರಿನಲ್ಲಿ ನಡೆಸಿದ ವಿದ್ರೋಹಿ ದಂಗೆಯ ವಿಕರಾಳಗಳು. ಇದರ ಪರಿಣಾಮ ಭೂಮಿಯ ಮೇಲಿನ ಜೀವ ಬಳಗದಲ್ಲಿ ಆಗಿರುವ ಆಗುತ್ತಿರುವ ಆಘಾತಕಾರಿ ವಿನಾಶ. ಹೀಗಾಗಿ ಇಲ್ಲಿ ಮುಗ್ಧತೆ ಎಂಬುದು ಪ್ರಶ್ನೆಯ ಬಾಣ ಎಸೆಯುತ್ತದೆ ನಿರಾಳವಾಗಿ. ಈ ನಿರಾಳತೆಯ ಎದುರು ಲೆಕ್ಕಾಚಾರದ ಜ್ಞಾನಮಿತಿ ತತ್ತರಿಸುತ್ತದೆ. ತತ್ತರಿಸುತ್ತಲೆ ಮತ್ತೆ ಪ್ರಶ್ನೆಗೆ ಅಭಿಮುಖಿಯಾಗುತ್ತದೆ. ಪ್ರಶ್ನೆ ಅನುರಣಿಸುತ್ತಲೇ ಬಯಲ ತುಂಬುತ್ತದೆ. ಮಗುವಿನ ಕಣ್ಣು ಕವಿಯಮನದ ನಡುವೆ ವ್ಯಕ್ತ ಮಧ್ಯ. ಈ ವ್ಯಕ್ತಮಧ್ಯದ ಬದುಕಿನ ಮೇಲೆ ನರನ ಹುಂಬುಸಾಹಸಗಳು ಕ್ರೂರಸ್ವಾರ್ಥಗಳು ಮೆರೆದ ಪರಿಣಾಮದ ದಾರುಣ ಸಂಕಟಾನುಭವಗಳು. ಪರಂಪರೆ ವರ್ತಮಾನ ಭವಿತವ್ಯಗಳ ಸಾತತ್ಯದಲ್ಲಿ ಬದುಕು ಬೆಳಗಬೇಕೆನ್ನುವ ಹಂಬಲ ಈ ಅನಾಹತಗಾನದಲ್ಲಿ ಅನುರಣಿಸಿ ಹರಿದಿದೆ. ಗಣೆ ಮೂಲದ ನೆಲದ ಬದುಕಿನ ಪ್ರಾತಿನಿಧಿಕ ಶಕ್ತಿ ಸಂಕೇತವಾಗಿ ಇಲ್ಲಿ ಮಗುವಿನ ಕಣ್ಣಿದೆ. ಪ್ರಶ್ನೆ ವಿಸ್ಮಯದ ಪ್ರಸ್ತಭೂಮಿಯಲ್ಲಿ ಅದು ಜಂಗಮವಾಗಿದೆ. ಕೃತಕ ಜ್ಞಾನಮತಿಯ ಅತ್ಯಾಚಾರಕ್ಕೆ ತತ್ತರಿಸಿದ ವ್ಯಕ್ತಮಧ್ಯದಲಿ ನಿಂತು ಕವಿಯ ಮನಸ್ಸು ಅದರ ನೋವಿಗೆ ನುಡಿಗೊಟ್ಟಿದೆ. ಐತಿಹ್ಯ ಹಾಗೂ ವಸ್ತುಸಂಗತಿಗಳ ಒಳಹರವಿನಲ್ಲಿ ಹರಿದಾಡುವ ಇಲ್ಲಿನ ಅನುಭವ ಸದ್ಯದ ಬದುಕಿನ ಹಲವು ಸಂಕಟಗಳಿಗೆ ದನಿಗೊಟ್ಟಿದೆ. ರಗುತಮ್ಹುಣಿಸೆಯ ಬೀಜ ತಿನ್ನುತ್ತಿದ್ದ ಅಳಿಲಿನ ದುರಂತ ಹಾಗೂ ಕತೆಕೇಳುತ್ತಿದ್ದ ಕುದಿಗಣ್ಣ ಹುಡುಗನು ಬಯಲ ಆತ್ಮನಾದ ವಿದ್ಯಮಾನ ಇವುಗಳ ನಡುವೆ

ಮಳೆಬಿಲ್ಲ ಕುಡಿವ ಬಯಕೆ ನಿಟ್ಟುಸಿರಿನ ಸುಟ್ಟವಾಸನೆ ಈ ದ್ವಂದಮಾನ ಪರಿಸ್ಥಿತಿ. ಪಂಚಭೂತಗಳು ಇಲ್ಲಿ ವಂಚನೆಗೆ ಒಳಗಾಗಿವೆ. ವಿನಾಶವನ್ನೇ ಜೀವನಗತಿಯಾಗಿಸಿಕೊಂಡ ಈ ಸನ್ನಿವೇಶದಲ್ಲಿ ಜ್ಞಾನವೆಂಬುದು ಅಹಂಕಾರವಾಗಿದೆ' ಪಾಪವಾಗಿದೆ. ಈ ಅಹಂಕಾರದ ಗರ್ಭದಲ್ಲಿ ಅಕ್ಷರ ಬಿತ್ತಬೇಕಾದ ಬೆಳಗು ಹೂತುಹೋಗಿದೆ. ಈ ಬೆಳಗನ್ನು ಕಂಡುಕೊಳ್ಳುವ ಅದರ ಆವರಣದಲ್ಲಿ ಬದುಕನ್ನು ಕಟ್ಟುವ ಅಗತ್ಯವಿದೆ. ಇದು ಕವಿಮನದ ಹುಡುಕಾಟ. ಹೀಗಾಗಿ ಇಲ್ಲಿ ಪ್ರಶ್ನೆ ಎಸೆಯುವ ಮಗು ಅಕ್ಷರದ ಹಾಡಿನಲ್ಲಿ ಉತ್ತರ ಮುಖಿಯಾದ ಕವಿ-ಈ ಮುಖಾಮುಖಿ ಸಾತತ್ಯಗೊಂಡಿದೆ. ಇದು ಪರಂಪರೆ ಹಾಗೂ ಅಣುಕ್ಷಣದ ನಡುವಿನ ಮುಖಾಮುಖಿ.

ಪ್ರಶ್ನೆ ಕೇಳುತ್ತಾನೆ ಹುಡುಗ ಮತ್ತೆಮತ್ತೆ
ಸಾಗರವು ಉಕ್ಕಿದ ಹಾಗೆ; ನಭವು ನಕ್ಕಹಾಗೆ.

ಧ್ಯಾನಸ್ಥ ಮನಸ್ಸು ಮಾತ್ರ ಕಟ್ಟಿಕೊಡಬಹುದಾದ ಪದಬಂಧ ಈ ರಚನೆ. ಬಂಡಾಯದ ಅಬ್ಬರ ಉಡುಗಿಹೋದ ನಂತರದಲ್ಲಿ ಹುಟ್ಟಿಕೊಂಡ ಅನುಸಂಧಾನ ವಿಧಿಯ ಈ ಮೌನಧ್ವನಿಗೆ ನಮ್ಮ ಬೇರಿನಾಳದ ಬಯಕೆಗಳಿಗೆ ಮುಗಿಲ ಬಯಲಲ್ಲಿ ಹೂಹಣ್ಣುಗಳ ಲಾಲಿ ಹಾಡುವ ನೆಲದ ದನಿಶಕ್ತಿ ಇದೆ. ನವ್ಯದ ಭಾಷೆಗೆ ವ್ಯಂಗ್ಯದ ಮೊನಚು ಇತ್ತು. ಅದು ಬೌದ್ಧಿಕ ಅಹಂಕಾರ ಮೂಲದ ಮಾತಾಗಿತ್ತು. ಆದರೆ ಆ ವ್ಯಂಗ್ಯದ ಮೊನಚಿಗೆ ನೆಲದ ಬನಿ ಇರಲಿಲ್ಲ. ಬಂಡಾಯದ ಅಬ್ಬರದಲ್ಲಿ ನೆಲದ ಬನಿ ಇದ್ದರೂ ಕಾವ್ಯದ ಸೂಕ್ಷ್ಮತೆಗಳಿರಲಿಲ್ಲ. ಈ ಕೊರತೆಗಳನ್ನು ನೀಗಿಸಿದಂತೆ ಇತ್ತೀಚಿನ ರಚನೆಗಳು ಮೂಡಿಬರುತ್ತಿವೆ. ಈ ಸಾಲಿನಲ್ಲಿ ಶಂಕರ ಕಟಗಿಯವರ ದನಿ ವಿಶೇಷತೆ ಗಮನಾರ್ಹವಾದುದು. ಇದು ಮಣ್ಣಿಗಂಟಿದಂತೆ ಬದುಕನ್ನು ಕಟ್ಟಿದ ಕೂಡುಕುಟುಂಬ ಸಂಸ್ಕೃತಿಯೊಳಗಿನ ದನಿಯ ಬನಿ. ಅವಮಾನದ ಬೆಂಕಿಯನ್ನು ಬಗೆಯೊಳಗೆ ಕರಗಿಸಿಕೊಂಡು ನಾದವಾದುದು. ಆ ನಾದ ನೆಲದ ಜೀವಜಾಲಗಳಿಗೆಲ್ಲ ನೆಮ್ಮದಿಯ ಬದುಕ ಅರಸಿ ಹೊರಟದ್ದು.

ಕಣಿವೆ ಕೊಳ್ಳದ
ಹೊಕ್ಕುಳ ದಾರಿ ಹಿಡಿದು
ಗಣೆನಾದ ನಡೆದವು
ಹುಡುಕಿ ಹುಡುಕಿ ದಣಿದವು
ಹಸಿರು ಹೊಲ ನೀಲ ಜಲ......
ಯಾವ ದಾರಿಗೂ
ಇಲ್ಲ ಅರವಟಿಗೆ
ಇಲ್ಲ ಬೇವಿನ ಮರ

ಶಿಲೆಕೊರೆವ ಗಿರಣಿ
ಗರ ಬಡಿದ ಗಣೆಯಲ್ಲಿ

ಬೆಂಗಾಡ ಧಗೆ ಇತ್ತು
ಬೆವರುಂಡ ಮುಖದಲ್ಲಿ

ಬಗಲ ತತ್ರಾಣಿಯಲ್ಲಿ
ಚಂದ ಮುತ್ತಿ ನದಿಬಗಲ ಜಲವೂ ಬತ್ತಿತ್ತು.

ಈ ನೆಲದ ಬುಡಕಟ್ಟುಗಳ ಬದುಕಿನ ಸ್ಥಿತಿಯನ್ನು ತಣ್ಣಗಿನ ಮಾತುಗಳಲ್ಲಿ ಕಟ್ಟಿಕೊಟ್ಟಿರುವ ಈ ರಚನೆ ಗಾಢವಾಗಿ ಕಲಕುತ್ತದೆ. ಇದು ಶಂಕರ ಕಟಗಿ. ಕೂಡುಕುಟುಂಬಗಳ ಹೊಕ್ಕುಳದಾರಿ ಹಿಡಿದು ನಡೆದ ಗಣೆಯಸಾದದ ಕಟಗಿ. ಬುಡಕಟ್ಟುಗಳ ಬದುಕಿನ ದಾರುಣತೆ ಆಳವಾಗಿ ಕಾಡಿರುವ ರೀತಿಯಲ್ಲಿಯೇ ಆ ನೆಲಮೂಲದ ಸಾಂಸ್ಕೃತಿಕ ಚೇತನಗಳ ಸಾವೂ ಕವಿಯನ್ನು ಅಗಾಧವಾಗಿ ಕಾಡಿದೆ. ಪರಂಪರೆಯ ಪ್ರತೀಕವಾದ ಅಜ್ಜಿ, ಜೇವರ ಮಳೆಸುರಿಸಿ, ಬದುಕು ಕಟ್ಟಿದ್ದ ಅಪ್ಪ ಇವರ ಸಾವು ಕವಿಗೆ ವ್ಯಕ್ತಿ ಮಾತ್ರದವರ ಸಾವಾಗಿ ಕಂಡಿಲ್ಲ.

ಅಜ್ಜಿ ಹಬ್ಬುವ ಹೊಕ್ಕುಳ ಬಳ್ಳಿ; ಕುಡಿಯ ಹೂಮಿಡಿಗೆ ಹುಳ
ಕಸಗಾಯಿ ಇಸಗಾಯಿ ಮಾಗದ ಫಲ
ಏಳು ಮಕ್ಕಳ ತಾಯಿ, ಈಡುಗಾಯಿ
..........................................
ಹೀಗೆ ಅಜ್ಜಿ ನೆಲದ ನಿಧಿಯಾದುದು
ಕತ್ತಲ ಕಷಾಯ, ಹಗಲ ಹಾಲನು ಕುಡಿದು

ಅಜ್ಜಿಯ ಸಾವಿನ ಹಿನ್ನೆಲೆಯಲ್ಲಿ ಇಡೀ ಅವಳ ಜೀವಿತದ ಜೀವಧಾತುವಿನ ಅವಲೋಕನವನ್ನು ಕವನ ಕಟ್ಟಿಕೊಟ್ಟಿದೆ. ಇದು ನಮ್ಮ ತಳಮೂಲ ಸಂಸ್ಕೃತಿಗಳ ಬಹುತೇಕ ಅಜ್ಜಿಯಂದಿರ ತಾಯಿತನದ ದೊಡ್ಡಬದುಕಿನ ಚಿತ್ರಣ. ರಾಮಾಯಣ ಮಹಾಭಾರತಗಳ ಯಾವ ಪಾತ್ರವೂ ಇಂಥ ಈ ನಮ್ಮ ನಡುವಿನ ಮಹಾ ಪಾತ್ರಗಳ ಎದುರಿಗೆ ದೊಡ್ಡವು ಎನಿಸಿಕೊಳ್ಳವುದಿಲ್ಲ. ಅಂಥ ಆತ್ಮಸಂಪನ್ನ ನೀತಿ ನಿಯತ್ತಿನ ಸಿರಿಬಾಳುವೆ ಅವರದು. ಆದರೆ ಅದನ್ನು ಪರಿಭಾವಿಸದ ಸಾಮಾನ್ಯಮತಿಗಳಿಗೆ ಇಂಥವರ ಜೀವನ ಹಿತ್ತಲಗಿಡದ ಅವಜ್ಞೆಯ ಧೋರಣೆಯದು. ಅಂಥ ಜೀವಗಳ ಸಾವಿನ ಸಂದರ್ಭವೂ ಮನುಷ್ಯನ ಸಣ್ಣತನಗಳ ಅನಾವರಣದ ಅಖಾಡಗಳೇ ಆಗುವುದು ಬದುಕಿನ ವ್ಯಂಗ್ಯ. ಇಂಥ ದೊಡ್ಡ ಜೀವದ ಬದುಕಿನ ಅನುಭಾವಿಕ ಧರ್ಮಸೂಕ್ಷ್ಮವನ್ನು ಕವಿ ಮನೋಜ್ಞವಾಗಿ ಮೂಡಿಸಿದ್ದಾರೆ.

ಸಾವಿನ ಮನೆಯೊಳಗಿನ ಸಂಕಟವನ್ನು ಮೊಗೆದು ಕಳೆಯಲಾರದು ಅಳುವು. ನೋವನ್ನು ನುಂಗುತ್ತಲೇ ಜೀವದ ಜೀವನವನ್ನು ಮರುಜೀವಣಗೊಳಿಸಿ ಹಾಡುವ ಪರಂಪರೆ ಇದೆಯಲ್ಲ ಅದೇ ಬದುಕನ್ನು ಬಾಳಿಸಿರುವ ಜೀವ ಜಲಧಾರೆ. ಅಪ್ಪನ ಸಾವಿನ ಹಿನ್ನೆಲೆಯಲ್ಲಿ ಮಗನ ನುಡಿಗಡಣ ತುಂಬಿಕೊಂಡಿರುವುದು ಈ ಪರಂಪರೆಯ ಜೀವಜಲವನ್ನು. ಅನಾದಿಯಿಂದ ಬದುಕಿನೊಳಗೆ ಹಾರಿರುವ ಹಾರುತ್ತಿರುವ ಹಾರಲಿರುವ ಹಂಸಪರಂಪರೆ ಈ ಸಾವು, ಸಾವು ತಂದ ನೋವು. ಇದು ಚಿತ್ರಚೌಕಟ್ಟಿನ ಪ್ರತಿಮಾಗೃಹವಲ್ಲ; ಮೌನಧ್ಯಾನದೊಳಗಿನ ನೆನಪಿನ ನುಡಿದೀವಿಗೆ.

ದಟ್ಟ ಕತ್ತಲು
ಗವಿಯಲಿ ಪುಟ್ಟ ದೀಪ
ಹಚ್ಚಿಟ್ಟ ಹಾಗೆ ಈ ಸಾವಿನ ಮನೆ.

ಮುಗಿಲ ಸೆರಗಿನ ತುದಿಗೆ
ಬರೆದ ಅಕ್ಷರವನು ಅರೆಬರೆ
ಅಳಕಿಸಿದಂತೆ ನಕ್ಷತ್ರ ಮಂಡಲ
ಬುಳಸು ರೊಟ್ಟಿ ತುಣುಕಿನಂತೆ - ಚಂದ್ರ
ಇನ್ನೊಂದು  ಬದಿಗೆ
ಮನೆ ಅಂಗಳದಲಿ ಸಂದೇಶಕ್ಕಾಗಿ
ಸಪ್ಪಳಿಲ್ಲದೆ ಸುಳಿದಾಡುವ ಹೆಜ್ಜೆಗಳು

ಈ ಕೂಡುಕುಟುಂಬದ ಹೊಕ್ಕುಳ ಬಳ್ಳಿಯ ಸಂಬಂಧ ಅನಾಹತವಾದುದು. ಕೊಂಡಿ ಕಳಚಿಕೊಳ್ಳದ ಕರುಳಬಳ್ಳಿಯ ಬಾವುಣಿಕಿ ಅದರ ಪ್ರಾಣದ್ರವ್ಯ. ದೊಡ್ಡಮಾರ ಚಿಕ್ಕಮಾರ ಸಣ್ಣಮಾರ ಪುಟ್ಟಮಾರ ಮರಿಮಾರ ಇವನ ಮಗ ದೊಡ್ಡಮಾರ ಮಗ ಚಿಕ್ಕಮಾರ. ಇದು ಈ ಬೆಳ್ಳಿಕುಡಿವರಿದ ಹೊಳೆದಂಡೆಯ ಬದುಕಿನ ಗರಿಕೆಸಾಲು. ಇಂಥ ಬದುಕಿನ ಆಲಾಪದಲ್ಲಿ ಸಾವು ಒಂದು ತುದಿಯಾದರೆ ಹುಟ್ಟು ಒಂದು ಆದಿ. ನಡುವೆ ಮುಟ್ಟು ನಿಂತದ್ದು ಈ ಬದುಕು.

ಠಪ್ಪಂತ ಚಿಪ್ಪೊಡೆದು ಇರುಳು ಚೆಲ್ಲಾಪಿಲ್ಲಿ
ಮುಗಿಲ ನೆತ್ತರ ಸೆರಗು;
ಆ ಸೆರಗ ಧಮನಿಯಲಿ ಧಗಧಗಿಸುವ ಜೀವ
ಸೂರ್ಯಕಾಂತಿಯ ಹೂವ;

ನಮ್ಮ ಕನ್ನಡನಾಡು ಕಾವ್ಯಸಂದರ್ಭದಲ್ಲಿ ಮಕ್ಕಳ ಬಾಲಲೀಲೆಗಳನ್ನು ಕಂಡುಂಡು ಅನುಭವಿಸಿದ ಆನಂದವನ್ನು ಹಲವು ಜನ ಕವಿಗಳು ಕವನವಾಗಿಸಿದ್ದಾರೆ. ಅವರ ಅನುಭವ ಆಧ್ಯಾತ್ಮಿಕ ಚಿಂತನೆಯ ಜಾಡುಹಿಡಿದು ಜೀವನಸಿದ್ಧಾಂತವನು ಧೇನಿಸಿದ್ದೂ ಆಗಿದೆ. ಇದು ಹೆಚ್ಚಾಗಿ ನವೋದಯ ಸಂದರ್ಭದ ಕವಿಗಳಲ್ಲಿ ಕಾಣುವ ರಚನಾ ವಿಶೇಷ. ಆದರೆ ನವ್ಯದ ಸೀಮೆಯಲ್ಲಿ ಇದು ಕಾಣ ಸಿಗದ ಅಭಾವ. ಕಟಗಿಯವರ ಈ ಸಂಕಲನದಲ್ಲಿ ಮಗಳ ಬಾಲಲೀಲೆಯನ್ನು ಬೆರಗಿನ ಆಟವನ್ನು ಕಂಡುಂಡ ಕವಿಯಭಾವಸಿರಿ ಪ್ರಕೃತಿ ಸಹಜ ವಿದ್ಯಮಾನದ ಘನಸಿರಿಯಾಗಿ ಆ ಅನುಭವವನ್ನು ಪರಿಭಾವಿಸಿದೆ. ಮಗಳು ಬರೆದ 'ಪಾರೋಳ'-

ಬೊಟ್ಟು ಕೂಸು ಬರೆದ
ಬೆರಳಗೆರೆ ಆಕಾರವದು.
ಆ ಆಕಾರದೊಳಗಡಗಿದ್ದು
ಭೂಮಿ ನಡುಗಿದ ಸಾವೋ
ಚಂದನ ಗೊಂಬೆಗಳ ಹಸಿವೋ
ಹೆಪ್ಪುಗಟ್ಟಿದ ನದಿಯೋ
ಸಾಗರದ ವೇದನೆಯೋ
ಬಲ್ಲವರಾರು ಹಕ್ಕಿಯ ತವನಿಧಿಯ?

ಹಟಮಾರಿ ಮಗಳ ಸಿಟ್ಟು ಎಸೆದ ಬಣ್ಣದ ಬಟ್ಟಲು ಬರೆದದ್ದು ರಂಗೋಲಿ ರಂಗಾಗಿ ಹರಡಿದಾಗ ಅಲ್ಲಿ ಮಗಳ ಹುಡುಕಾಟ ಸುರುವಾಗುತ್ತದೆ. ಇದನ್ನು ಪರಿಭಾವಿಸಿದ ಕವಿ-

ಜೀವ ವೃಕ್ಷದ ಮೆಳೆಯು
ಆ ರಂಗು ಹರಡಿದ ಜಾಗ
ನೂರು ಪ್ರತಿಮೆಗಳ ತಪ್ಪಲಲಿ
ಹೊಡೆ ಹೂವ ಬೆಳಗಿನಲಿ
ಅವಿತಿದ್ದು ಜೀವಧ್ವನಿ-ಸ್ಪರ್ಶ.

ಎನ್ನುತ್ತಾರೆ. ಹುಡುಕಾಟ ಅದರ ಹಿಂದಿನ ಅನಪೇಕ್ಷಿತ ಸಿಟ್ಟಿನ ಕ್ರಿಯೆ ಇವುಗಳ ಸಾಪೇಕ್ಷತಾ ಕ್ರಿಯಾಧರ್ಮದಲ್ಲಿ ನಿಸರ್ಗದ ಕ್ರಿಯಾಶೀಲತೆಯ ಪರಮ ಗುಂತವ್ಯ ಕಾಣಿಸಿರುವುದು ಇಲ್ಲಿನ ವಿಶೇಷ. ಮಗುವಿನ ಮುಗ್ಧ ಕಣ್ಣು ನಿರಾಳವಾಗಿ ಎಸೆದ ಪ್ರಶ್ನೆಯ ಮೂಲಹಿಡಿದು ಕವಿ ನಡೆಸುವ ಹುಡುಕಾಟಕ್ಕೂ ಇಲ್ಲಿನ ಈ ಮಗಳ ಹುಡುಕಾಟಕ್ಕೂ ವ್ಯತ್ಯಾಸವಿದೆ. ಮಗುವಿನ ಮುಗ್ಧ ಪ್ರಶ್ನೆಯ ಬೆನ್ನುಹಿಡಿದ ಹುಡುಕಾಟದಲ್ಲಿ ಮಾನವ ಕೃತ್ಯಕ್ಕೆ ಬಲಿಯಾದ ವ್ಯಕ್ತಮಧ್ಯದ ದಾರುಣ ದುರಂತಗಳ ಕ್ರೂರ ಸತ್ಯ ರಾಚುತ್ತದೆ. ಮಗಳ ಹುಡುಕಾಟದಲ್ಲಿ ಕಂಡದ್ದು ಮಾತಿಗೆ ನಿಲುಕದ್ದು. ಈ ಹುಡುಕಾಟ ನಡೆಯುವುದೂ 'ಹೊತ್ತು ನೆತ್ತಿಗೇರುವ ತನಕ' ಮಗಳ ಮನಸ್ಸು ಬುದ್ಧಿಯು ಕೈನ ಸೂತ್ರವಾಗುವವರೆಗಿನ ಆ ಬೆರಗು ಆ ಬೆಳಗು ಅವುಗಳ ನಡುವಿನ ಆ ಹುಡುಕಾಟ. ಇದು ಒಂದು ಸೃಜನ ಕ್ರಿಯೆ.

'ಮಗಳ ಬೆರಗಿನ ಆಟ'ದ ಹಿನ್ನೆಲೆಯಲ್ಲಿ ಕವಿಗೆ ಮೋಟು ಜಡೆಯ ಮಗಳು ಮನೆಯ ದೀಪವಾಗಿ ಕಂಡಿದ್ದಾಳೆ. ಇವಳಾಡುವ ಗೊಂಬೆಯಾಟ ಎಲ್ಲ ಗ್ರಾಮೀಣ ಮೂಲದ ಹೆಣ್ಣುಮಕ್ಕಳ ಬಾಲಲೀಲೆಯಲ್ಲಿ ಆಚರಣೆಯಂತೆ ಮೈತಾಳುವ ಆಟ. ಈ ಆಟದ ವೈಖರಿಯಲ್ಲಿ ಹೆಣ್ಣೊಬ್ಬಳ ನೆರೆದ ಒಸಗೆಯಿಂದ ಹಿಡಿದು ಮದುಮಗಳಾಗಿ ಮೊರೆಯುವವರೆಗಿನ ಬೆಡಗು ಬಿನ್ನಾಣಗಳು ಚಿತ್ರಿತವಾದ ಆಚರಣೆ ಅದಾಗಿದೆ. ಮಗಳ ಈ ಆಟದ ಆಚರಣಾಮಾಟದಿಂದಾಗಿ ಹಾಗೂ ಅವಳ ಉತ್ಸಾಹಿತ ಭಾವದಿಂದಾಗಿ ಅದ ಪ್ರತಿಸ್ಪಂದನವನ್ನು-

ಹೊಂಗೆ ಮರದ ರೆಂಬೆಯಾಗಿ
ನಡೆದಳು ಮಗಳು ಕೈಯ ಬೀಸಿ
ಕಲ್ಲೆಸೆಗ ಚಿಲ್ಲೆಂದು ಜಲಚಿಮ್ಮಿ ಮೊಳೆ ಹರಿದ ಹಾಗೆ
ಬೆರಗುಗಣ್ಣಿನ ಬೆಳಕು
ಕೆರೆಕಟ್ಟೆ ನಿಂತಿಹುದು
ಮಗಳ ಆಟಕೆ ಮೈಮರೆತ ಮರ ಮತ್ತೆ ಅರಳುತಿಹವು.

ಎಂದು ಕವಿ ದಾಖಲಿಸಿದ್ದಾರೆ. ಹೀಗೆ ಯಾವುದೇ ತಾತ್ವಿಕ ದರ್ಶನಧೋರಣೆಯನ್ನು ಹೇರಿಕೊಳ್ಳದೆ ಪ್ರಕೃತಿ ಸಹಜ ಮನೋಧರ್ಮವಾಗಿ ಈ ಅನುಭವವನ್ನು ಕಂಡರಿಸಿರುವ ಕಾವ್ಯಕರ್ಮ ಆಪ್ಯಾಯವಾಗಿದೆ.

ಕಟಗಿಯವರ ಅನುಭವ ದ್ರವ್ಯ ಕೂಡುಕುಟುಂಬದ ಪರಿಧಿಗೆ ಮಾತ್ರ ಕಟ್ಟಿಹಾಕಿಕೊಂಡದ್ದಲ್ಲ; ಅದರಾಚೆಗಿನ ಸಮುದಾಯ, ಅದರಾಚೆಗಿನ ಗಡಿಗೆರೆಗಳನ್ನು ದಾಟಿ ಲೋಕದ ಸಾಮಾಜಿಕ ಸಾಂಸ್ಕೃತಿಕ

ರಾಜಕೀಯ ಆಗುಹೋಗುಗಳನ್ನು ತನ್ನ ಕುಟುಂಬ ಪ್ರಜ್ಞಾ ಕೇಂದ್ರ ವರ್ತುಲಕ್ಕೆ ಒಳಗು ಮಾಡಿಕೊಂಡು ಪರಿಭಾವಿಸಬಲ್ಲುದು. ಹೀಗೆ ಪರಿಭಾವಿಸುವಾಗ ಕಳ್ಳುಬಳ್ಳಿಯ ರಾಗದ್ವೇಷಗಳು ಸಹಜಸ್ಪಂದನಗಳಾಗಿ ಆಕೃತಿ ಪಡೆಯುತ್ತವೆ. ಇಲ್ಲಿ ರಾಗದ್ವೇಷಗಳೆಂದರೆ ಅವು ವ್ಯಕ್ತಿಗತ ದೌರ್ಬಲ್ಯಗಳಾಗದೆ ಮಾನವೀಯ ಮೌಲ್ಯಗಳ ಸಾಮಾಜಿಕ ನ್ಯಾಯವೆಂಬ ಅಂತಃಕರಣದ ನಡೆಯಾಗಿರುತ್ತದೆ. ಈ ಕೆಳಗಿನ ಕೆಲವು ಉದ್ದರಣೆಗಳನ್ನು ಗಮನಿಸಿ-

ಮಕ್ಕಳೇ-
ಬಿಡುಗಡೆಯಾಗಿದೆ ಇಂಡಿಯಾ
ಬದುವಿನಲಿ ಹೆಣಗಳಿವೆ, ರುಜುವುಗಳಿವೆ
ಕನಸುಗಳಿರಬಹುದೇನೊ.....
ಹುಡುಕ ಹೊರಟರು ಮಕ್ಕಳು....
ಗಂಗೆ ಯಮುನೆಯ ಹೊಂಗೆ ಹೊಂದಾವರೆಗಳ
ಅವರಿಗೆ-
ಶಿಲೆಯಲ್ಲಿ ಚಾಚಾನ ತುಸು ನಗುವು ಸಿಕ್ಕವು.
ಸಂವಿಧಾನದ ಕಡತ, ಲಾಂಛನಗಳು ಸಿಕ್ಕವು
ಸಾವಿನ ವಿದ್ಯಮಾನಗಳು ಸಿಕ್ಕವು.

**(ಇಂಡಿಯಾ ಮತ್ತು ಮಕ್ಕಳು)**

ಕೆಂಡದ್ಹೂವಿನ ಒಡಲು ನಾಗಮಂಡಲವು
ಅಂಡದಲಿ ಚಿಂದಿ ಬದುಕು
ನಾಡೀನ ಗಡಿಯಲ್ಲಿ ನೆತ್ತರವು ಚಲ್ಲಿತ್ತು
ರುಜುವಿತ್ತು ಸಾವಿನಲ್ಲಿ

**(ಕರಿಮಯ್ಯನ ಸ್ವಾತಂತ್ರ್ಯ ಗೀತೆ)**

ಸೋಮಾಲಿಯಾಕ್ಕೆ ಸದ್ಯ ಕನಸುಗಳೇ ಇಲ್ಲ
ಕೊಳೆತ ಹೆಣಗಳ ವಾಸನೆ ಬೀಸುಗಾಳಿಯಲ್ಲಿ
ಮೂಳೆ ಮರಗಳ ಮೇಲೆ
ಸೋಮಾಲಿಯಾ ಪಕ್ಷಿಗಳು ಹಾಡುತ್ತವೆ
ಆ ಹಾಡು; ಹಸಿದ ಮೌನವನು
ಸಾವನುಂಡ ನೆಲಜಲವನು
ನೊಂದು ನೆಕ್ಕುತ್ತವೆ.

ವಸಾಹತುಶಾಹಿ ಆಕ್ರಮಣದಲ್ಲಿ ನಲುಗಿದ ನೆಲದ ಬದುಕಿನ ಬಗ್ಗೆ ಕವಿಯ ಸಂಕಟ ಸಿಟ್ಟುನುಂಗಿದ ತಪ್ತಸ್ಥಿತಿಯದು. ಈ ತಪ್ತತೆಯಲ್ಲಿ ಪತಾಕೆಗಿಂತ ತಣ್ಣಗಿನ ಅವಲೋಕನದಲ್ಲಿ ವಿವೇಕ ಮಾತನಾಡಿದೆ. ರೂಪಕದ ಪರಿಭಾಷೆಯಲ್ಲಿ ವಸ್ತುಸಂಗತಿಗಳು ಒಳವೇದನೆಗಳು ಆಕೃತಿ ಪಡೆದಿವೆ.

ಪ್ರೀತಿ ಪ್ರೇಮಗಳು ಸಾಮಾಜಿಕ ಚೌಕಟ್ಟಿನ ನೀತಿನಿಯತಿಗಳ ಧರ್ಮಸಾರವನ್ನು

ಜೀರ್ಣಸಿಕೊಂಡು ಆಪರಾಜಿಗಿನ ಮಾನವೀಯ ಸೆಳೆತಗಳಿಗೆ ಹಾತೊರೆದಿವೆ. ಇದು ದ್ವಂದ್ವಮಾನ ಸಂಘರ್ಷವಾಗದ, ನಿಯತಿಗಿಂತ ನಿಜದ ಸೆಳೆತ ಗೆಲ್ಲುವ ನಡೆ. ನಿಯತಿ ವ್ಯಕ್ತಿಸ್ವಾತಂತ್ರ್ಯವನ್ನು ಕಸಿದ ಜಡನಡೆಯ ಬದುಕಾದರೆ ನಿಯಮೋಲ್ಲಂಘನೆ ನಿಸರ್ಗ ಧರ್ಮದ ಋತುಗಾನ.

ಕವಿದ ಕೌತುಕದೊಳಗೆ ಮಾತಿನಾಗಿಣಿ ಬಂದು
ಮಿತವಾಗಿ ನುಡಿದಿತ್ತು ಸ್ಫಟಿಕದಂಥಾ ಮಾತ
'ಮುತ್ತಿನ ದೇವರು ಮುತ್ತ ಮಾರುತ ಬಂದ'

ಸಾರಿಸಿದ ಮನೆಯಂಗಳಕ್ಕೆ ಎದೆ ದುಗುಡ ಕಲೆಸಿ
ಕನಸ ರಂಗೋಲಿ ಬರೆದು ಪುಳಕ ತೋರಣ ಕಟ್ಟಿದೆ
ಚಿತ್ತವನೆ ಬತ್ತಿಹೊಸೆದು ದೀವಿಗೆ ಹೊತ್ತಿಸಿದೆ
..................
ಜೋಳಿಗೆಯಿಂದ ಜೋಗಿ
ತಾನೇ ಮುತ್ತಿನ ಗೊಂಡೆ ತೆಗೆದ
..................
ನವಿಲಾದೆ ನಾನು
ನಾದವಾದನು ಅವನು.......

ಹೀಗೆ ಶಂಕರನ ಸಂವೇದನಾದ್ರವ್ಯದಲ್ಲಿ ವೈಯಕ್ತಿಕ ನೆಲೆಯ ಪರಿಮಿತಿಯಿಂದ ಹಿಡಿದು ಜಾಗತಿಕ ವಿದ್ಯಮಾನಗಳ ಪರಿವ್ಯಾಪ್ತಿಯವರೆಗಿನ ಘಟನಾ ವಿಶೇಷಗಳು ಆಲೋಚನೆಗೆ ಒಳಗಾಗಿವೆ. ಉತ್ತರ ಕರ್ನಾಟಕದ ಶ್ರಮ ಸಂಸ್ಕೃತಿಯ ಬದುಕಿನ ಬನಿಯನ್ನು ಒಳಗೊಳ್ಳಲು ತಹತಹಿಸಿವೆ. ದುಃಖ ದುಮ್ಮಾನ ದಾರುಣತೆ ವ್ಯಗ್ರ ವಿಷಾದ ನಿರೀಕ್ಷೆ ಇತ್ಯಾದಿ ಭಾವಸ್ಥಿತಿಗಳನ್ನು ಮುಖಾಮುಖಿಯಾಗಿಸಿಕೊಂಡ ಸೂಕ್ಷ್ಮ ಸಂಕೀರ್ಣ ಸ್ವರೂಪದಲ್ಲಿ ಇಲ್ಲಿನ ಚಿಂತನೆಯ ದ್ರವ್ಯ ಜೀವ ತಳೆದಿದೆ. ಇದು ಕಟಗಿ ಎಂಬ ಪರಿಯಲಿ ಭಾಷಾ ಪ್ರಯೋಗ ಆಕೃತಿಗೊಂಡಿದೆ. ಇದು ಬಯಲ ಪದ; ಇದು ಅನಾಹತಗಾನ.

●

---

ಎಸ್. ಜಿ. ಸಿದ್ಧರಾಮಯ್ಯ, 'ಹೊಂಬೆಳಗು' ನಲಂದ ಶಾಲೆ ಪಕ್ಕ, ರಾಘವೇಂದ್ರನಗರ
ತುಮಕೂರು - ೫೭೨೧೦೩.

## ವಾರ್ಷಿಕ ಚಂದಾದಾರರ ಗಮನಕ್ಕೆ

ಅನಿಕೇತನ ವಾರ್ಷಿಕ ಚಂದಾದಾರರಾಗಿರುವವರೆ
ತಮ್ಮ ಚಂದಾ ಅವಧಿ ಮುಗಿದಿದೆ.
ದಯವಿಟ್ಟು ಚಂದಾ ನವೀಕರಿಸಿ

## ಸ್ಟ್ರೀಟ್ ಚಿಲ್ಡ್ರನ್

ಅಕ್ಷರಗಳ ತಿದ್ದಬೇಕಾದ ಬಾಲ್ಯ
ರದ್ದಿ ಪೇಪರಿನಲಿ ಸಿಕ್ಕಿಕೊಂಡಿದೆ
ಹಾಲು ಕುಡಿಯಬೇಕಾದ ಹಸುಳೆಯ ಶೈಶವ್ಯ
ಹಾಲಿನ ಕವರುಗಳ ಬೇಟೆಯಲಿ ಕೈಜಾರಿ ಹೋಗಿದೆ.
ಯಾವ ಅಮಾವಾಸ್ಯೆ ಅವರ ಬೀದಿಪಾಲು ಮಾಡಿಹಾಕಿತೋ ?

ಕೇವಲ ಬದುಕಲಿಕ್ಕಾಗಿ
ಎಷ್ಟೊಂದು ಯುದ್ಧಗಳ ಮಾಡುತ್ತಾರವರು
ಎಷ್ಟು ಸಲ ಗಾಯಗೊಳ್ಳುತ್ತಾರೆ ಗೊತ್ತಾ ?
ತಿಪ್ಪೆಗುಂಡಿಯಿಂದ ವಸ್ತುಗಳ ಹೊರತೆಗೆದು
ಪ್ರೀತಿಯಿಂದ ಚೀಲದಲಿ ಹಾಕಿಕೊಳ್ಳುತಿರುವ
ಅವರ ನೋಡುತ್ತಿದ್ದರೆ
ಪ್ರಾಚ್ಯವಸ್ತು ಸಂಶೋಧಕರು ನೆನಪಾಗುತ್ತಾರೆ

ಅವರು ನಡೆಯುತ್ತಿದ್ದರೆ
ಆತ್ಮಸ್ಥೈರ್ಯವೇ ಸಾಕಾರವಾದಂತೆ ಭಾಸವಾಗುತ್ತದೆ.

- ಮಹೆ ಜಬೀನ್



Reg. No. 45646/88

Price : 20/-